

# ಸಿದ್ಧಗಂಗಾ



ಮೇ ೨೦೦೨




ರಕ್ಷಣಾ ಸಚಿವರಾದ ಶ್ರೀ ಜಾರ್ಜ್ ಫರ್ನಾಂಡಿಸ್ ಅವರಿಂದ ಜ್ಯೋತಿ ಬೆಳಗಿಸುವುದರ ಮೂಲಕ
ಶ್ರೀ ಗುರುವಂದನಾ ಕಾರ್ಯಕ್ರಮದ ಉದ್ಘಾಟನೆ




ಮುಖ್ಯಮಂತ್ರಿ ಶ್ರೀ ಎಸ್.ಎಂ. ಕೃಷ್ಣ ಅವರಿಂದ
ನರ್ಸಿಂಗ್ ಕಾಲೇಜು ಕಟ್ಟಡದ ಉದ್ಘಾಟನೆ




ರಾಜ್ಯಪಾಲ ಸನ್ಮಾನ್ಯ ಶ್ರೀಮತಿ ವಿ.ಎಸ್. ರಮಾದೇವಿ ಅವರಿಂದ
ಅಂಧ ಮಕ್ಕಳ ಶಾಲಾ ಕಟ್ಟಡದ ಉದ್ಘಾಟನೆ





ಪರಮಪೂಜ್ಯ ಶ್ರೀ ಶ್ರೀಗಳವರಿಂದ ಗೌರವ ಸಮರ್ಪಣೆ





ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಾದ

  




ಮುಖಪುಟ
ಗುರುವಂದನಾ ಮಹೋತ್ಸವ
ಉದ್ಘಾಟನಾ ಸಮಾರಂಭದ
ಚಿತ್ರಾವಳಿ



॥ ಓಂ ಶ್ರೀ ಗುರು ಬಸವ ಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ


ಸಂಪುಟ : ೩೮ ಮೇ ೨೦೦೨ ಸಂಚಿಕೆ : ೫


ಒಳಪುಟಗಳಲ್ಲಿ..........




ಪ್ರಧಾನ ಸಂಪಾದಕ
ಪ. ಚೆನ್ನಪ್ಪ ಎರೇಸೀಮೆ

ಸಂಪಾದಕ
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ
ಎಚ್.ಎಸ್. ಸಿದ್ಧಗಂಗಪ್ಪ

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್,
ನಂ. ೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು – ೫೪
ದೂರವಾಣಿ : ೩೬೦೪೦೮೭


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ


ವಿಳಾಸ :
''ಸಂಪಾದಕರು'', 'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪

ಚಂದಾ ವಿವರ :

| | |
|---|---|
| ವಾರ್ಷಿಕ ಚಂದಾ | ರೂ. ೧೦೦/– |
| ಆಜೀವ ಸದಸ್ಯತ್ವ | ರೂ. ೫೦೦/– |
| ಬಿಡಿ ಪ್ರತಿ | ರೂ. ೧೦.೦೦ |



## ''ಬಸವ ಜಯಂತಿಯ ಆಚರಣೆ

ಈ ವರ್ಷ ಮೇ ೧೪ ರಂದು ಬಸವ ಜಯಂತಿ. ಕಳೆದ ಬಸವ ಜಯಂತಿಯಿಂದ ಇಲ್ಲಿಯವರೆಗೆ ಬಸವ ತತ್ವಪ್ರೇಮಿಗಳು ಮುನ್ನಡೆದಿದ್ದಾರೆಂದೇ ಭಾವಿಸೋಣ. ಬಸವಣ್ಣನವರ ಹೆಸರಿನಲ್ಲಿ ಹತ್ತು-ಹನ್ನೊಂದು ಯೋಜನೆಗಳನ್ನು ರೂಪಿಸಿ ಕಾರ್ಯಮುಖಿಗಳಾಗಿದ್ದಾರೆಂಬುದು ನಿಜ. ಬಸವತತ್ವ ಸ್ಮರಣೆ, ಪ್ರಚಾರ, ಉತ್ಸವ, ಜಯಂತಿ, ಪ್ರಶಸ್ತಿಗಳ ಮೂಲ ಜಾಗೃತಿಯನ್ನು ತಂದು ಕೊಟ್ಟಿದ್ದಾರೆ. ಅಲ್ಲಲ್ಲಿ ಅವರವರ ಆಲೋಚನೆ, ಅನಿಸಿಕೆಗಳಿಗೆ ಆಕಾರ ಕೊಟ್ಟಿದ್ದಾರೆ. ಎಲ್ಲವೂ ಸ್ವಾಗತಾರ್ಹ. ಈ ಮಧ್ಯೆ ಮಹಾರಾಷ್ಟ್ರ ಸರ್ಕಾರ ಬಸವ ಜಯಂತಿಯನ್ನು ಸರ್ಕಾರದ ಆಚರಣೆಯಾಗಿ ಮಾಡಲು ಆದೇಶ ಹೊರಡಿಸಿದ್ದು ಅಭಿನಂದನೀಯ. ಈ ವರ್ಷದಿಂದ ಬಸವ ಜಯಂತಿ ಕಾರ್ಯಕ್ರಮವನ್ನು ಸರ್ಕಾರದ ವತಿಯಿಂದ ನಾಡಿನೆಲ್ಲೆಡೆಯಲ್ಲಿ ಆಚರಿಸುತ್ತಿರುವುದು ಅಭಿಮಾನದ ಸಂಗತಿ. ಸರ್ಕಾರ ಕೈಕೊಂಡ ಈ ದಿಟ್ಟ ನಿರ್ಧಾರಕ್ಕೆ ಅಭಿನಂದನೆಗಳು.

ಕರ್ನಾಟಕದದುದ್ದಗಲದಲ್ಲಿರುವ ವೀರಶೈವ ಮಠಗಳು ಒಂದಲ್ಲ ಒಂದು ರೀತಿಯಲ್ಲಿ ತಮ್ಮ ಸೇವಾ ಕ್ಷೇತ್ರದಲ್ಲಿ ಬಸವಣ್ಣನವರು ಆಚರಿಸಿ ತೋರಿಸಿದ ಶರಣ ಪಥದಲ್ಲಿ ಹೆಜ್ಜೆ ಹಾಕುತ್ತಿರುವುದು ಸಂತೋಷವನ್ನುಂಟು ಮಾಡಿದೆ. ಬಸವತತ್ವಗಳು ಪ್ರಸ್ತುತವೆಂಬುದನ್ನು ಪ್ರಚುರಪಡಿಸುತ್ತವೆ. ಕೆಲವು ಸಂಸ್ಥೆಗಳಂತೂ ಅರ್ಪಿತ ಮನೋಭವದಿಂದ ಶ್ರಮಿಸುತ್ತಿವೆ.

ಇಂದು ಜಾಗತಿಕ ಮಟ್ಟದಲ್ಲಿ ಬಸವ ತತ್ವಗಳ ವಿಚಾರ ಪ್ರಸ್ತಾಪವಾಗುತ್ತಿದೆ. ಆದರೆ ಅದರ ಪ್ರಮಾಣ ಇನ್ನೂ ಹೆಚ್ಚಬೇಕಾಗಿದೆ. ಅದಕ್ಕೂ ಮೊದಲು ಕರ್ನಾಟಕದ ಎಲ್ಲ ಗ್ರಾಮಗಳ ಎಲ್ಲ ಸಮಾಜದ ಬಂಧುಗಳ ಭಗಿನಿಯರ ಬಳಿಗೆ ಬಸವಣ್ಣನನ್ನು ಕರೆದುಕೊಂಡು ಹೋಗಬೇಕಾಗಿದೆ. ''ಬಸವಣ್ಣ ಸಮಗ್ರ ಕ್ರಾಂತಿಯ ಮೂಲಪುರುಷ'' ಎಂಬ ಹೆಗ್ಗಳಿಕೆಗೆ ಪಾತ್ರನಾಗಿದ್ದರೂ, ಆ ಕ್ರಾಂತಿಪುರುಷನನ್ನು ಎಲ್ಲರಿಗೂ ಪರಿಚಯಿಸಿಕೊಟ್ಟಿಲ್ಲವೆಂಬುದು ಸತ್ಯಸ್ಯ ಸತ್ಯ. ಹಳ್ಳಿ-ಹಳ್ಳಿಗಳಗಳೆನ್ನದೆ ಬಸವಣ್ಣನನ್ನು ಪರಿಚಯಿಸುವ ಸೇವೆ ಮೊದಲು ಬಸವ ತತ್ವಾಭಿಮಾನಿಗಳಿಂದ ಆಗಬೇಕಾದ ಕೆಲಸ. ಅದು ಯಾವ ರೂಪದಲ್ಲಾದರೂ ಆಗಬಹುದು. ಮೊದಲು ಪರಿಚಯವಾಗಬೇಕು. ಈ ನಿಟ್ಟಿನಲ್ಲಿ ದೂರದರ್ಶನದಲ್ಲಿ ''ಅಣ್ಣ ಬಸವಣ್ಣ'' ಧಾರವಾಹಿ ಭಿತ್ತರವಾದದ್ದು ಸ್ವಾಗತಾರ್ಹ. ಅದಕ್ಕಾಗಿ ಶ್ರಮಿಸಿದ ನಿರ್ಮಾಪಕರು, ನಿರ್ದೇಶಕರು, ಕಲಾವಿದರು, ತಂತ್ರಜ್ಞರು, ದೂರದರ್ಶನದ ಅಧಿಕಾರಿಗಳೆಲ್ಲ ಸ್ಮರಣೀಯರು. ಅಂತೆಯೇ ಸರ್ಕಾರದ ವಚನ ಸಾಹಿತ್ಯ ಸಮಗ್ರ ಸಂಪುಟಗಳ ಪುನರ್ ಪ್ರಕಟಣೆಯನ್ನೂ ಸ್ಮರಿಸುವುದು ಮುಖ್ಯವೇ ಆಗಿದೆ. ಯಾವುದೇ ಒಂದು ಯೋಜನೆ ಪ್ರಯೋಜನಕ್ಕೆ ಬರುವುದು ಅದನ್ನು ಬಿತ್ತಿದವರ, ಬೆಳೆದವರ, ಆರೈಕೆ ಮಾಡುವವರ ಶ್ರದ್ಧೆ ವಿಶ್ವಾಸಗಳನ್ನು ಅವಲಂಬಿಸಿರುತ್ತದೆ.

ಲೋಕದ್ದು ವಿಚಿತ್ರಸ್ವಭಾವ. ಮಹಾಪುರುಷರನ್ನು ಯಾವುದೇ ಒಂದು ಜಾತಿಗೆ, ದೇಶಕ್ಕೆ ಸೀಮಿತಗೊಳಿಸಿಬಿಡುವುದು. ಬಸವಣ್ಣನವರನ್ನು ಲಿಂಗಾಯಿತರಿಗೆ, ವರ್ಧಮಾನನ್ನು ಜೈನರಿಗೆ, ಅಂಬೇಡ್ಕರ್‌ರನ್ನು ದಲಿತರಿಗೆ, ಬುದ್ಧನನ್ನು ಬೌದ್ಧರಿಗೆ, ಕ್ರಿಸ್ತನನ್ನು ಕ್ರೈಸ್ತರಿಗೆ, ಪೈಗಂಬರನನ್ನು ಮುಸ್ಲಿಂಮರಿಗೆ ಕಟ್ಟಿ ಹಾಕುತ್ತೇವೆ. ಈ ಎಲ್ಲರೂ ಮನುಕುಲದ ಕಲ್ಯಾಣಕ್ಕಾಗಿ ಶ್ರಮಿಸಿದವರು, ಜೀವ ತೆತ್ತವರು ಎಂಬುದನ್ನು ಮರೆಯುತ್ತೇವೆ. ಜಾತಿ ಕುಲಸೀಮೆಗಳನ್ನು ಮೀರಿದವರಿಗೆ ಜಾತಿಯ ಬಂಗಾರದ ಸಂಕೋಲೆಯನ್ನು ತೊಡಿಸುತ್ತೇವೆ. ಇನ್ನೊಂದು ವಿಚಿತ್ರವೆಂದರೆ, ಸಾರ್ವಜನಿಕ ವೇದಿಕೆಗಳಲ್ಲಿ ಜಾತ್ಯಾತೀತರಾಗುವ ನಾವೇ ನಮ್ಮ ನಮ್ಮ ಮಠ, ಮಂದಿರ, ಮಸೀದಿ, ಚರ್ಚುಗಳೊಳಗೆ ಜಾತ್ಯಾಂಧರಾಗುತ್ತೇವೆ. ಇದನ್ನು ಕಂಡೇ ಬಸವಣ್ಣನವರು ಅಂದೇ ಹೇಳಿದ್ದು ಮರೆತು ಹೋಗುತ್ತದೆ. ''ಹೊರಗೆ ವಿನಯ ಒಳಗೆ ಕುಟಿಲ'' ಎನ್ನುತ್ತಾರೆ ಬಸವಣ್ಣನವರು. ಇದು 'ಆತ್ಮಾವಲೋಕನ'ವಾಗಬೇಕು. ಆದಾಗ ನಿಜವಾದ ಬಸವ ಜಯಂತಿ.

– ಸಂಪಾದಕ







## ಧರ್ಮಗುರುಗಳು ಮಾಡಬೇಕಾದ ಸಾಧನೆ

ಜಗತ್ತಿನ ಇಂದಿನ ಅಶಾಂತಿಗೆ ಧರ್ಮಗುರುಗಳೂ ಕಾರಣವಾಗಿದ್ದಾರೆ. ಧರ್ಮದ ನೈಜ ದರ್ಶನ ಮಾಡಿಕೊಳ್ಳದೇ ನಡೆದು ಬಂದಿದ್ದರಿಂದಾಗಿ ಮನುಕುಲ ಇಂದು ರಕ್ತಸಿಕ್ತ ದಾರಿಯಲ್ಲಿ ನಡೆಯುವಂತಾಗಿದೆ. ಯಾವುದೇ ಧರ್ಮ ಸ್ವಾರ್ಥಕ್ಕಾಗಿ ಅಲ್ಲ, ಸಾವು ನೋವುಗಳಿಗಾಗಿ ಅಲ್ಲ, ಜೀವನ ನೆಮ್ಮದಿಗಾಗಿ ಎಂಬುದನ್ನು ತಿಳಿಯಬೇಕಾಗಿದೆ. ಯುದ್ಧಗಳು ನಡೆಯುತ್ತಲೇ ಬಂದಿವೆ, ನಡೆಯುತ್ತಲೂ ಇವೆ. ಯುದ್ಧ ಯಾವುದೇ ಕಾರಣಕ್ಕಾಗಿ ನಡೆದಿರಲಿ ಸಾವು ನೋವು ನಿಶ್ಚಿತ. ಧರ್ಮವೆಂಬುದು ದಯೆಯ ಮತ್ತೊಂದು ರೂಪ. ಸೃಷ್ಟಿಯ ಸಮಸ್ತ ಜೀವ ಜಾಲಕ್ಕೂ ಬದುಕುವ ಹಕ್ಕಿದೆ. ಕೇವಲ ಮನುಷ್ಯರಿಗೆ ಮಾತ್ರವಲ್ಲ; ಎಲ್ಲ ಪ್ರಾಣಿ, ಪಕ್ಷಿ ಕುಲ, ಸಸ್ಯ ಕುಲಕ್ಕೂ ಆ ಹಕ್ಕಿದೆ. ತಳಿರು ತೋರಣಗಳಿಗೆಂದು ಹೊರೆ ಹೊರೆ ಮಾವಿನ ಎಲೆಗಳನ್ನು ತರಿದು ತರುವಾಗ ನಮಗೆ ನಮ್ಮ ಪ್ರಾಣದ ನೆನಪಾಗಬೇಕು. ನಮ್ಮ ಮನೆಯಲ್ಲಿ ಸಾಕಿದ ಗೋವು, ಹಸು, ಕುರಿ, ಕೋಳಿಗಳನ್ನು ಧರ್ಮದ ಹೆಸರಿನಲ್ಲಿ, ದೈವದ ಹರಕೆಗೆಂದು ಬಲಿಕೊಡುವಾಗ ನಮ್ಮ ಪ್ರಾಣದ ನೆನಪಾಗಬೇಕು. ಯಜ್ಞದ ಹೆಸರಿನಲ್ಲಿ ಹವಿಸ್ಸಿನ ರೂಪದಲ್ಲಿ ಪ್ರಾಣಿ ಬಲಿಯನ್ನು ಅರ್ಪಿಸುವಾಗ ನಮ್ಮ ಪ್ರಾಣದ ನೆನಪಾಗಬೇಕು. ಧರ್ಮ ಇರುವುದು ಹಿಂಸೆಯಲ್ಲಲ್ಲ; ದಯೆಯಲ್ಲಿ. ಧರ್ಮ ಯಾವುದಾದರೇನು ? ಯಾವ ಹೆಸರಿನಲ್ಲಿದ್ದರೇನು ? ದಯವೇ ಅದರ ಜೀವಾಳ. ಹಿಂದೂವಿನ ಮೈಯಲ್ಲಿನ ರಕ್ತವೂ ಕೆಂಪು; ಮುಸ್ಲಿಂನ ಮೈಯಲ್ಲಿನ ರಕ್ತವೂ ಕೆಂಪು, ಕ್ರಿಶ್ಚಿಯನ್ನನ ಮೈಯಲ್ಲಿನ ರಕ್ತವೂ ಕೆಂಪು; ಗಂಡಸಿನ ಮೈಯಲ್ಲಿನ ರಕ್ತವೂ ಕೆಂಪೇ, ಹೆಂಗಸಿನ ಮೈಯಲ್ಲಿನ ರಕ್ತವೂ ಕೆಂಪೇ, ಅಷ್ಟೇಕೆ ಧರ್ಮಗುರುವಿನ ಮೈಯಲ್ಲಿನ ರಕ್ತವೂ ಕೆಂಪು, ಭಕ್ತನ ಮೈಯಲ್ಲಿನ ರಕ್ತವೂ ಕೆಂಪು ಎಂದು ತಿಳಿಯುವುದು ಧರ್ಮ. ಹೀಗಿರುವಾಗ ಒಬ್ಬರನ್ನೊಬ್ಬರು ಕೊಲ್ಲುವುದು, ಸುಡುವುದು, ಸಾಯಿಸುವುದು ಧರ್ಮ ಹೇಗಾಗುತ್ತದೆ. ಈ ಭೂಮಿ ಇರುವುದೇ ಪರಸ್ಪರ ಸೌಹಾರ್ದತೆಯಿಂದ, ಶಾಂತಿಯಿಂದ ಬಾಳುವುದಕ್ಕಾಗಿ. ಈ ಸಾರ್ವತ್ರಿಕ, ಸಾರ್ವಕಾಲಿಕ ತತ್ವವನ್ನು ಧರ್ಮಗುರುಗಳೆನಿಸಿಕೊಂಡವರು ಅವರು ಯಾರೇ ಇರಲಿ, ಯಾವ ಧರ್ಮದ ಹೆಸರಿನವರಾಗಿರಲಿ, ಜಗತ್ತಿನ ಯಾವ ಮೂಲೆಯಲ್ಲಿಯೇ ಇರಲಿ ಮನುಕುಲಕ್ಕೆ ಬೋಧಿಸುತ್ತ ಬರಬೇಕಾದ ಅನಿವಾರ್ಯತೆ ಇಂದು ಅಗತ್ಯವಾಗಿದೆ. ಎಲ್ಲ ಧರ್ಮಗಳ ಸಾರವೂ ಕೂಡಿ ಬದುಕುವುದೇ ಆಗಿದೆ. ''ಮಾನವಧರ್ಮ''ಕ್ಕಾಗಿ ಎಲ್ಲರೂ, ಎಲ್ಲ ಸಿದ್ಧಾಂತಗಳೂ, ಎಲ್ಲ ಆಡಳಿತ ವ್ಯವಸ್ಥೆಗಳು, ಒಮ್ಮುಖವಾಗಿ ಮುನ್ನಡೆಯುವ ''ತುರ್ತು'' ಇಂದಿನದಾಗಿದೆ.

ಧರ್ಮದ ಚುಕ್ಕಾಣಿ ಹಿಡಿದಿರುವ ಪುಣ್ಯಾತ್ಮರು ವಿಶಾಲ ದೃಷ್ಟಿಯುಳ್ಳರಾಗಬೇಕು, ನಿರ್ಮಲ ಹೃದಯವಂತರಾಗಬೇಕು, ತೆರೆದ ಮನಸ್ಕರಾಗಬೇಕೀಗ. ಪವಿತ್ರ, ಚಾರಿತ್ರ್ಯ ಶುದ್ಧಿಯುಳ್ಳವರಾಗಬೇಕು. ತೊಟ್ಟ ವೇಷಕ್ಕೆ, ಕುಳಿತ ಪೀಠಕ್ಕೆ, ಕಟ್ಟಿದ ಮಠಕ್ಕೆ ಬೆಳಕಾಗಬೇಕು. ಅವರುಗಳು ಮಾಡುವ ಸಾಧನೆ, ಏಕಾಂತದ ಪೂಜೆ, ಲೋಕಾಂತದ ಕಲ್ಯಾಣಕ್ಕೆ ಮುಡುಪಾಗಬೇಕು. ಧರ್ಮಸಂಸ್ಥೆಗಳು ಮಠಗಳಾಗಿರಲಿ, ಮಸೀದಿಗಳಾಗಿರಲಿ, ಚರ್ಚುಗಳಾಗಿರಲಿ, ಬಸತಿಗಳಾಗಿರಲಿ, ಚಿಕ್ಕವಾಗಿರಲಿ, ದೊಡ್ಡವಾಗಿರಲಿ, ಒಂದೇ ಇರಲಿ, ಶಾಖೆಗಳನ್ನು ಹೊಂದಿರುವುದಾಗಿರಲಿ ಅವೆಲ್ಲ ''ಧರ್ಮಸಮನ್ವಯ'' ಮಂತ್ರವನ್ನು ಆಚರಣೆಯಲ್ಲಿ ತರಬೇಕು, ತನ್ನ ಅನುಯಾಯಿಗಳಿಗೆ ಬೋಧಿಸಬೇಕು. ದೀಪ ಸಣ್ಣದಿರಲಿ, ದೊಡ್ಡದಿರಲಿ ಅದು ಕೊಡಬೇಕಾದುದು ಬೆಳಕನ್ನು ಎಂಬುದನ್ನು ಸದಾ ಗಮನಿಸಬೇಕು.

ಅವುಗಳ ಆಚರಣೆಯಲ್ಲಿ ವೈವಿಧ್ಯತೆ ಇರಲಿ ಅದು ಮುಖ್ಯವಲ್ಲ, ವಿಚಾರ ಮಾತ್ರ ಒಂದೇ ಆಗಿರುವ ಆವಶ್ಯಕತೆ ಇಂದು ಬಹಳವಾಗಿದೆ. ರಾಮ, ರಹೀಮ, ಶಿವ, ಜಿನ, ಕ್ರಿಸ್ತ ಎಲ್ಲರೂ ಬೆಳಕೇ ಆದವರು, ಬೆಂಕಿಯಲ್ಲ ಎಂಬ ವಿಚಾರ ಮುಖ್ಯ. ಇದಕ್ಕಾಗಿ, ಈ ತಿಳಿವಿನ ವ್ಯಾಪಕ ಪ್ರಚಾರಕ್ಕಾಗಿ ಧರ್ಮಗುರುಗಳು ಶ್ರಮಿಸಬೇಕು. ಒಂದಾಗಬೇಕು, ಪರಸ್ಪರ ಬೆರೆಯಬೇಕು, ಬೆರೆತು ಬಾಳಬೇಕು. ಒಳ್ಳೆಯ ಬಾಳಿಗಿಂತ ಶ್ರೇಷ್ಠವಾದ ಧರ್ಮವಿಲ್ಲ; ದೇವರಿಲ್ಲ ಎಂಬುದನ್ನು ಲೋಕಕ್ಕೆ ಮನದಟ್ಟು ಮಾಡಿಕೊಡಬೇಕು. ಅದು ಇಂದಿನ ಧರ್ಮಗುರುಗಳು ಮಾಡಬೇಕಾದ ಸಾಧನೆ; ಪರಮೋಚ್ಚ ತಪಸ್ಸು.

ॐ



## ಶ್ರೀ ಸಿದ್ಧಲಿಂಗೇಶ್ವರ ವಚನ

*ಹಾರುವರ ಮನೆಯ ದೇವಿಯ ಹದಿರು ಚದುರಿನಲ್ಲಿ*
*ಹಲಬರು ಸಿಕ್ಕಿ ಕೆಟ್ಟರು ನೋಡಾ.*
*ಹಾರುವರಕೊಂದು ಹದಿರು ಚದಿರನಳಿದಲ್ಲದೆ*
*ದೇವರ ಕಾಣಬಾರದು ನೋಡಾ.*
*ಪ್ರಾಣಲಿಂಗಸಂಬಂಧಿಗಳೆಂಬರೆ, ನಾಚದವರನೇನೆಂಬೆನಯ್ಯಾ*
*ಮಹಾಲಿಂಗ ಗುರು ಶಿವಸಿದ್ದೇಶ್ವರ ಪ್ರಭುವೇ ?*

ಸಕಲ ಪ್ರಪಂಚಕ್ಕೆ ಆಶಿಸುವ ಜೀವತ್ರಯಗಳಿಗೆ ಆಧಾರವಾದ ದೇಹ ಸಂಬಂಧವಾದ ವಿದ್ಯಾಶಕ್ತಿಯ ಭಿನ್ನಕ್ರಿಯೆ, ಭಿನ್ನಜ್ಞಾನಗಳಿಗೆ ಒಳಗಾದ ಆತ್ಮರುಗಳು ಕಾಲನ ಬಾಧೆಗೊಳಗಾಗಿ ನಷ್ಟವಾಗಿದ್ದರು. ಆ ಜೀವತ್ರಯಂಗಳ ವರ್ತನೆಯ ಸುಜ್ಞಾನೋದಯದಿಂದ ನಿವೃತ್ತಿಮಾಡಿ, ಲಿಂಗತ್ರಯ ಸ್ವರೂಪವಮಾಡಿ ಭಿನ್ನಕ್ರಿಯೆ, ಭಿನ್ನಜ್ಞಾನವಳಿದಲದೆ ಲಿಂಗದ ಕುರುಹನರಿಯಬಾರದು. ಅಂತಹ ಭಿನ್ನಕ್ರಿಯೆ ಭಿನ್ನಜ್ಞಾನಗಳಲ್ಲಿ ವ್ಯವಹರಿಸಿ ಭವಭವಗಳಲ್ಲಿ ಸಂಚರಿಸಿ ಕೋಟಲೆಗೊಂಡು, ನಾವು ಪ್ರಾಣಲಿಂಗ ಸಾಹಿತ್ಯ ಸಂಬಂಧಿಗಳೆಂದು ಹೇಳಿಕೊಳ್ಳಲು ಅಭಿಮಾನಿಸದ ಅಜ್ಞಾನಿಗಳ ಕಂಡು, ಸುಜ್ಞಾನ ಸ್ವರೂಪ ನಾದ ಶರಣ ಲಿಂಗದಲ್ಲಿ ಮೌನಮುದ್ರಿತನಾಗಿದ್ದಾಗೆ ಎನ್ನುತ್ತದೆ ವಚನ.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿ ಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನ ಸಾರಾಮೃತದ ಬೆಡಗಿನ ವಚನದ ಟೀಕೆ-ಪ್ರಕಾಶಕರು- ವೀರಶೈವ ಅಧ್ಯಯನ ಸಂಸ್ಥೆ - ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ - ಡಂಬಳಿ - ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

*''ಘನಮಹಿಮ ಶರಣರ'' ಅನುದಿನವು ತೋರಿದೆ*
*ಘನಕೆ ಘನವಾದುದನರುಹಿದೆ । ನನ್ನ ತಂದೆ*
*ಸಿದ್ಧಗಂಗಾ ಗುರುವೆ ಕೃಪೆಯಾಗು ॥*

*ಬಸಿರ ಶಿಶುವಿನ ನೋವ ತಾಯಿ ತಾನುಣ್ಣುವಂತೆ*
*ಶಿಶು ಶಿಷ್ಯರ ನೋವು ತನ್ನದೆಂಬ । ನನ್ನ ತಂದೆ*
*ಸಿದ್ಧಗಂಗಾ ಗುರುವೆ ಕೃಪೆಯಾಗು ॥*

*''ತನ್ನರಸಿ ಬಪ್ಪವರ ತಾನರಸಿ ಬಪ್ಪಂತೆ''*
*ದೇವಾ ನೀನರಸಿ ಬರುತಿಹೆ । ನನ್ನ ತಂದೆ*
*ಸಿದ್ಧಗಂಗಾ ಗುರುವೆ ಕೃಪೆಯಾಗು ॥*

*''ನಿಂದರೆ ನೆಳಲಿಲ್ಲ ಸುಳಿದರೆ ಪದವಿಲ್ಲ''*
*ಕಾಯವಿಡಿದು ಕಾಯಧ್ರಮೆಯಿಲ್ಲ । ನನ್ನ ತಂದೆ*
*ಸಿದ್ಧಗಂಗಾ ಗುರುವೆ ಕೃಪೆಯಾಗು ॥*

*ನಿನ್ನ ಕಂಡ ಬಳಿಕ ಕರ್ಮವಿರುವುದುಂಟೆ ?*
*ನಿನ್ನ ದರುಶನದಿಂದ ಶತಪುಣ್ಯ । ನನ್ನ ತಂದೆ.*
*ಸಿದ್ಧಗಂಗಾ ಗುರುವೆ ಕೃಪೆಯಾಗು ॥*

*ನಿನ್ನ ಚರಣವ ಮುಟ್ಟಿ ಧನ್ಯವಾಯಿತು ಜನುಮ*
*ನಿನ್ನ ಬೋಧೆಯ ಕೇಳಿ ಕೃತಕೃತ್ಯ । ನನ್ನ ತಂದೆ*
*ಸಿದ್ಧಗಂಗಾ ಗುರುವೆ ಕೃಪೆಯಾಗು ॥*

*ಲೋಕ ಲೋಕಗಳೆಲ್ಲ ತವ ಕರಸ್ಥಲದೊಳಗೆ*
*ಸಾಟಿ ನಾ ಕಾಣೆನು ಜಗದೊಳಗೆ । ನನ್ನ ತಂದೆ*
*ಸಿದ್ಧಗಂಗಾ ಗುರುವೆ ಕೃಪೆಯಾಗು ॥*

*ಸ್ತೋತ್ರಪ್ರಿಯ ನೀನಲ್ಲ ಶಾಸ್ತ್ರ ಪ್ರಿಯ ನೀನಲ್ಲ*
*ದಾಸೋಹ ಪ್ರಿಯ ನೀ ಸಿರಿ ದೊರೆಯೆ । ನನ್ನ ತಂದೆ*
*ಸಿದ್ಧಗಂಗಾ ಗುರುವೆ ಕೃಪೆಯಾಗು ॥*

*ಏಕಾಂತದೂರನೆ ಲೋಕಾಂತಾಸಕ್ತನೆ*
*ಲೋಕಮಂಗಳ ಕೃಷಿಕ ಶ್ರಮಿಕನೆ । ನನ್ನ ತಂದೆ*
*ಸಿದ್ಧಗಂಗಾ ಗುರುವೆ ಕೃಪೆಯಾಗು ॥*

*''ಎನ್ನ ಭರಭಾರ ನಿನ್ನದಯ್ಯಾಸ್ವಾಮಿ''*
*ಎನ್ನ 'ಹಾನಿವೃದ್ಧಿ' ನಿನ್ನದಯ್ಯ । ತಂದೆ*
*ಸಿದ್ಧಗಂಗಾ ಗುರುವೆ ಕೃಪೆಯಾಗು ॥*

**- ಹೆಚ್.ವಿ. ವೀರಭದ್ರಯ್ಯ**







# ಕವಿ ಮತ್ತು ವಚನಕಾರ - ಬಸವಣ್ಣ

**ಡಾ|| ಗುರುಲಿಂಗ ಕಾಪಸೆ**
*ಅಧ್ಯಕ್ಷರು, ಸಾಹಿತ್ಯ ಅಕಾಡೆಮಿ*
*ಬೆಂಗಳೂರು*

ಬಸವಣ್ಣನವರನ್ನು ಕವಿ, ವಚನಕಾರರೆಂದು ಹೊಸದಾಗಿ ಸಿದ್ಧಮಾಡಿಕೊಡಬೇಕಾದ ಪರಮೇಯವೇ ಇಲ್ಲ. ಶಿ.ಶಿ. ಬಸವನಾಳ, ಎಂ.ಆರ್. ಶ್ರೀನಿವಾಸ ಮೂರ್ತಿಯರಾದಿಯಾಗಿ, ಡಾ|| ಜಿ.ಎಸ್. ಶಿವರುದ್ರಪ್ಪ, ಡಾ|| ಎಚ್. ತಿಪ್ಪೇರುದ್ರಸ್ವಾಮಿ, ಶ್ರೀ ಚೆನ್ನವೀರ ಕಣವಿ, ಶ್ರೀ ಸುಜನಾ ಮೊದಲಾದ ಅನೇಕ ವಿದ್ವಾಂಸರು ಬಸವಣ್ಣನವರ ವಚನಗಳಲ್ಲಿಯ ಸಾಹಿತ್ಯಿಕ ಗುಣ ಮತ್ತು ಮೌಲ್ಯವನ್ನು, ಕಾವ್ಯ ಸೌಂದರ್ಯ ಮತ್ತು ವ್ಯಂಜಕ ಸಾಮಗ್ರಿಗಳನ್ನು ಗುರುತಿಸುತ್ತ, ಎತ್ತಿ ತೋರಿಸುತ್ತ ಬಂದಿದ್ದಾರೆ. ಧಾರ್ಮಿಕ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿ ಯುಗಪುರುಷರೆನಿಸಿದ ಬಸವಣ್ಣನವರು ಸಾಹಿತ್ಯ ಕ್ಷೇತ್ರದಲ್ಲಿಯೂ ಯುಗುಪುರುಷರಾಗಿರುವುದು ಒಂದು ವಿಶೇಷ. ಧಾರ್ಮಿಕ, ಸಾಮಾಜಿಕ ಮತ್ತು ಸಾಹಿತ್ಯಿಕ ಕ್ಷೇತ್ರಗಳಲ್ಲಿ ಅವರದು ಬರಿಯ ಒಂದು ಸಾಧನೆಯಲ್ಲ; ಅದೊಂದು ಅಸಾಧಾರಣವಾದ ಕ್ರಾಂತಿ. ಈ ಬಗೆಯ ತ್ರಿಮುಖ ಕ್ರಾಂತಿಯನ್ನು ಏಕಕಾಲದಲ್ಲಿ ಸಾಧಿಸಿ ತೋರಿಸಿದವರು ಕನ್ನಡದಲ್ಲಿ ಇನ್ನೊಬ್ಬರಿಲ್ಲ. ವಿಶ್ವ ಸಾಹಿತ್ಯದಲ್ಲಿಯೂ ಇಂಥ ವ್ಯಕ್ತಿತ್ವವುಳ್ಳವರು ತೀರ ವಿರಳವೆಂದೇ ಹೇಳಬೇಕು. ಕ್ರಿಸ್ತ, ಬುದ್ಧರ ಮಾಲಿಕೆಯಲ್ಲಿ ಪರಿಗಣಿತರಾಗಿರುವ ಬಸವಣ್ಣನವರು ವಿಶ್ವದ ಮಹಾವಿಭೂತಿಗಳಲ್ಲಿ ಒಬ್ಬರೆಂಬುದು ಸರ್ವವಿದಿತ. ಆದರೆ ಏಸುಕ್ರಿಸ್ತ ಮತ್ತು ಭಗವಾನ್ ಬುದ್ಧರು ಬಸವಣ್ಣನವರಂತೆ ಸೃಜನಶೀಲ ಸಾಹಿತಿಗಳಾಗಿ ಸಾಹಿತ್ಯಿಕ ಯುಗಪುರುಷರೆಂದು ಗಣಿಸುವಂತಿಲ್ಲ. ಹೀಗೆಂದ ಮಾತ್ರಕ್ಕೆ ಅವರು ಬಸವಣ್ಣನವರಿಗಿಂತ ಕಡಿಮೆಯವರು ಎಂದರ್ಥವಿಲ್ಲ. ಅವರಿಗಿಂತ ಭಿನ್ನವಾಗಿ ಬಸವಣ್ಣನವರು ಸಾಹಿತ್ಯಿಕವಾದ ವಿಶೇಷ ಘನತೆಯನ್ನು ಮೆರೆದವರು ಎಂಬುದನ್ನು ಸೂಚಿಸಲು ಈ ಮಾತನ್ನು ಹೇಳಬೇಕಾಯಿತು.

ಹನ್ನೆರಡನೆಯ ಶತಮಾನದ ವಚನಕಾರರಲ್ಲಿ ಬಸವಣ್ಣನವರ ವಚನಗಳು ಉಳಿದ ಬಹುತೇಕ ವಚನಕಾರರಿಗಿಂತ ಹೆಚ್ಚು ಸಾಹಿತ್ಯಿಕ ಗುಣಗಳಿಂದ, ಕಾವ್ಯ ಲಕ್ಷಣಗಳಿಂದ ಕೂಡಿರುವುದು ಗಮನಿಸತಕ್ಕ ಸಂಗತಿಯಾಗಿದೆ. ವಚನಗಳು ಮೂಲತಃ ಆಧ್ಯಾತ್ಮಿಕ ಅನ್ವೇಷಣೆಯಲ್ಲಿ ಮೂಡಿದವಾದ್ದರಿಂದ ಅವುಗಳಲ್ಲಿ ತಾತ್ತ್ವಿಕ ವಿವೇಚನೆಯಿರುವುದು ಸ್ವಾಭಾವಿಕ. ವಚನಗಳು ಶಾಸ್ತ್ರವೇ ಸಾಹಿತ್ಯವೇ ಎಂಬ ವಾದವೂ ಈ ತಾತ್ತ್ವಿಕ ಕಾರಣದಿಂದಲೇ ಹುಟ್ಟಿಕೊಂಡಿದ್ದು. ಒಂದು ನಿರ್ದಿಷ್ಟ ಸಾಧನೆಯನ್ನು ಅಂದರೆ ಷಟ್‌ಸ್ಥಲ ಮಾರ್ಗವನ್ನು ಸುವ್ಯವಸ್ಥಿತವಾದ ಕ್ರಮದಲ್ಲಿ ನಿರೂಪಿಸುವ ಅವು ಶಾಸ್ತ್ರವೆನಿಸಿದರೂ ಶಾಸ್ತ್ರದ ಶುಷ್ಕ, ನೀರಸ ಲೆಕ್ಕಾಚಾರಕ್ಕೆ ಒಳಗಾಗಿಲ್ಲ. ಚೆನ್ನಬಸವಣ್ಣನವರಂಥ ಕೆಲವು ವಚನಕಾರರ ವಚನಗಳಲ್ಲಿ ಶಾಸ್ತ್ರೀಯ ದೃಷ್ಟಿ ಪ್ರಖರವಾಗಿರಬಹುದು. ಅನುಭಾವದ ಬೆಡಗಿನಲ್ಲಿ ಅಲ್ಲಮಪ್ರಭುದೇವರ ವಚನಗಳು ಗೂಢವೂ ಆಗಿರಬಹುದು. ಹಾಗಿದ್ದರೂ ಅವರ ವಚನಗಳು ನೂರಕ್ಕೆ ನೂರರಷ್ಟು ಶಾಸ್ತ್ರಕೃತಿಗಳೇ ಆಗಿಲ್ಲ. ಅಲ್ಲಿಯೂ ಅನುಭವದ ತೀವ್ರತೆ, ಉಪಮಾನ ದೃಷ್ಟಾಂತಗಳ ಬಳಕೆ ಬೇಕಾಗದಷ್ಟಿದೆ. ಅನುಭಾವದ ಅಮೂರ್ತ ವಿಷಯವನ್ನು ಮೂರ್ತೀಕರಿಸುವಾಗ ರೂಪಕಗಳನ್ನು, ಪ್ರತಿಮೆಗಳನ್ನು ಅವರು ಸೃಷ್ಟಿಸಿದ್ದುಂಟು. ಬಸವಣ್ಣನವರ ಮತ್ತು ಅಕ್ಕಮಹಾದೇವಿಯವರ ವಚನಗಳಲ್ಲಿ ಶಾಸ್ತ್ರಕ್ಕಿಂತ ಸಾಹಿತ್ಯ ಗುಣ ಹೆಚ್ಚಾಗಿರುವುದು ಗಮನಿಸತಕ್ಕ ಸಂಗತಿಯಾಗಿದೆ. ಇವರಿಬ್ಬರಲ್ಲಿ ಕವಿ ಮನೋಧರ್ಮ, ಪ್ರತಿಭಾ ಸಂಪನ್ನತೆ, ಚಿತ್ರಕಶಕ್ತಿ ಇವು ವಿಪುಲವಾಗಿದ್ದುದರ ಪರಿಣಾಮವಾಗಿ ಇವರ ವಚನಗಳು ಅನುಭಾವದ ಎತ್ತರದಲ್ಲಿದ್ದರೂ ಕಾವ್ಯದ ಹತ್ತಿರದಲ್ಲುಳಿಯುವಂತಾಗಿವೆ.

ಬಸವಣ್ಣನವರು ತೀವ್ರ ಸಂವೇದನಾಶೀಲರು, ಸೂಕ್ಷ್ಮಗ್ರಾಹಿಗಳು. ಹೆಜ್ಜೆ ಹೆಜ್ಜೆಗೂ ತಮ್ಮ ಅಂತರಂಗವನ್ನು ವಿಶ್ಲೇಷಣೆಗೆ ಒಳಪಡಿಸುವ, ಹಾಗೂ ಅಂತರಂಗ-ಬಹಿರಂಗಗಳೆರಡನ್ನೂ ಶುದ್ಧೀಕರಿಸುವ ಅವರ ಪ್ರಾಮಾಣಿಕ ನಿಲುವು ಮತ್ತು ಸಾಧನೆಗಳು ವೈಶಿಷ್ಟ್ಯಪೂರ್ಣವಾದವುಗಳು. ಅವರ ವಚನಗಳು ನಿಸ್ಸಂದೇಹವಾಗಿ ಭಾವಗೀತೆಗಳ ಅಂತಃಸತ್ವದಿಂದ ತುಂಬಿಕೊಂಡಿವೆ. ಅಂತೆಯೇ ಡಾ. ರಂ. ಶ್ರೀ

ಮುಗಳಿಯವರು "ಅವರ ಒಂದೊಂದು ವಚನವು ಭಾವಗೀತೆಯ ಸತ್ವ, ಸೌಂದರ್ಯಗಳನ್ನು ಒಡಗೂಡಿಸಿಕೊಂಡ ಬಿಡಿ ಬಿಡಿ ಮುಕ್ತಗಳಂತಿವೆ" ಎಂದೂ, "ಅವುಗಳಲ್ಲಿ ಅಧ್ಯಾತ್ಮಿಕ ಭಾವಗೀತೆಯ ಸತ್ವವಿದೆ" ಎಂದೂ ಹೇಳಿದ್ದುದು ಗಮನಾರ್ಹವಾಗಿದೆ. ಕಾವ್ಯದ ಮುಖ್ಯ ಲಕ್ಷಣಗಳಲ್ಲೊಂದಾದ ಉಕ್ತಿ ವೈಚಿತ್ರ್ಯದ ದೃಷ್ಟಿಯಿಂದಲೂ ಗಮನಿಸಿದ ಶ್ರೀಮತಿ ಎಚ್.ಎಂ. ಪಾರ್ವತಮ್ಮ "ಮನೋಹರವಾದ ಅಭಿವ್ಯಕ್ತಿಗಳಿಂದ ತುಂಬಿ ತುಳುಕುತ್ತಿರುವುದರಿಂದಲೇ ಬಸವಣ್ಣನವರ ವಚನಗಳು ಶ್ರೇಷ್ಠ ಕಾವ್ಯದ ಮಾದರಿಯಾಗಿವೆ" ಎಂದಿದ್ದಾರೆ. ಕನ್ನಡದ ಅತ್ಯಂತ ಮಹತ್ವದ ಸಾಹಿತ್ಯ ಚರಿತ್ರೆಗಳಲ್ಲಿ ವ್ಯಕ್ತಪಡಿಸಿದ ಈ ಅಭಿಪ್ರಾಯಗಳು ಬಸವಣ್ಣನವರ ಕವಿತ್ವಶಕ್ತಿಗೆ ಹಿಡಿದ ಕನ್ನಡಿಗಳಾಗಿವೆ.

ಕಾವ್ಯಕ್ಕೆ ಲಯ, ಛಂದಸ್ಸುಗಳು ಅದರ ಬಾಹ್ಯ ಸ್ವರೂಪಗಳಾದರೆ ಅಲಂಕಾರ, ವಕ್ರೋಕ್ತಿ, ಧ್ವನಿ, ರಸಗಳು ಅದರ ಅಂತರಿಕ ಗುಣಗಳು. ಬಸವಣ್ಣನವರ ವಚನಗಳು ರೂಪ(Form)ದಲ್ಲಿ ಯಾವುದೇ ನಿರ್ದಿಷ್ಟವಾದ ಲಯಕ್ಕೆ ಕಟ್ಟುಬಿದ್ದವಲ್ಲ. ಹಾಗೆ ಲಯಕ್ಕೆ ಕಟ್ಟುಬೀಳುವುದು ಅವುಗಳ ಉದ್ದೇಶವೂ ಅಲ್ಲ; ವೈಶಿಷ್ಟ್ಯವೂ ಅಲ್ಲ. ವಚನಗಳ ರೂಪವೇ ನಮ್ಮ ಸಾಹಿತ್ಯದಲ್ಲಿ ಒಂದು ವಿಶಿಷ್ಟ ಪ್ರಕಾರವಾಗಿದೆ. ಇಂಥ ಸಾಹಿತ್ಯ ಪ್ರಕಾರ ವಿಶ್ವಸಾಹಿತ್ಯದಲ್ಲಿಯೇ ಇನ್ನೊಂದಿಲ್ಲವೆಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. ಭಾವಕ್ಕೆ ತಕ್ಕ ಅಭಿವ್ಯಕ್ತಿಯುಳ್ಳ, ಉಪಮೆ-ದೃಷ್ಟಾಂತಗಳನ್ನು ಒಳಗೊಂಡ, ಒಂದು ನಿರ್ದಿಷ್ಟ ಅಂಕಿತವುಳ್ಳ ಇವುಗಳ ಮಾದರಿ ಅನನ್ಯವಾದುದು. ವಚನಗಳು ಗದ್ಯಪದ್ಯದ ನಡುವಿನ ಒಂದು ಮಾದರಿ ಎಂದು ವ್ಯಾಖ್ಯೆ ಹೇಳಿದ ಶಿ.ಶಿ. ಬಸವನಾಳರು "ವಚನಗಳಲ್ಲಿ ಗದ್ಯದ ನಿರರ್ಗಳತೆ ಇಲ್ಲದಿದ್ದರೂ ಅದರ ಸರಳತೆ ಇದೆ. ಪದ್ಯದ ಕ್ರಮಬದ್ಧ ಛಂದೋಗತಿ ಇಲ್ಲದಿದ್ದರೂ ಅದರ ಲಯವಿದೆ" ಎಂದು ವಿವರಣೆ ನೀಡಿದ್ದಾರೆ. ಚನ್ನವೀರ ಕಣವಿಯವರು "ಗದ್ಯದ ಉಡಿಗೆಯನ್ನೂ ಪದ್ಯದ ನಡಿಗೆಯನ್ನೂ ಮೇಳವಿಸಿಕೊಂಡು ಭಾವಲಹರಿಗೆ ತಕ್ಕಂತೆ ತೊನೆಯುತ್ತ ಸಾಗುವ ಆಕೃತಿ" ಎಂದು ಅಭಿಪ್ರಾಯಪಟ್ಟದ್ದಾರೆ. ಹೀಗಿರುವ ವಚನಗಳ ಲಯವು ತೀರ ಸ್ವತಂತ್ರವಾದದ್ದೆಂದೇ ಹೇಳಬೇಕಾಗುತ್ತದೆ. ವಚನ ರಚನೆಯ ಮೂಲವನ್ನು ಮಾದರಿಯನ್ನೂ ಕನ್ನಡದಲ್ಲಿಯೇ ಹುಡುಕ ಹೊರಟ ಡಾ|| ಎಂ. ಚಿದನಂದಮೂರ್ತಿಯವರು "ಜನತೆಗೆ ಅತ್ಯಂತ ಸಮೀಪವಾಗಿದ್ದ, ಅವರ ಆದರವನ್ನು ಗಳಿಸಿದ ತ್ರಿಪದಿಯನ್ನೇ ಮಾರ್ಪಡಿಸಿಕೊಂಡು ಮತಬೋಧನೆಯನ್ನು ಮನಮುಟ್ಟುವಂತೆ ನಿರೂಪಿಸಲು 'ವಚನ'ದ ಶೈಲಿಯ ಬೇರೊಂದು ವಿಧಾನವನ್ನು ವಚನಕಾರರು ರೂಪಿಸಿಕೊಂಡಿರಬಹುದು" ಎಂದು ಊಹಿಸಿದ್ದು ಸಮಂಜಸವಾದದ್ದಾಗಿ ಕಂಡುಬರುವುದಿಲ್ಲ; ತ್ರಿಪದಿಯು ಮೂಲತಃ ಛಂದೋಬದ್ಧವಾದದ್ದು. ಅಂಶಗಣಾತ್ಮಕವಾಗಿದ್ದ ಈ ಲಯವನ್ನು ಮಾತ್ರಾಗಣಕ್ಕೆ ಹೊರಳಿಸಿಕೊಂಡ ವಚನಕಾರರು ತ್ರಿವಿಧಿಗಳನ್ನು ಬರೆದದ್ದುಂಟು. ಆದರೆ ಅವರ ವಚನಗಳು ತ್ರಿಪದಿಗಳಿಂದ ಭಿನ್ನವಾದವುಗಳು. ವಚನಗಳು ಮೂರು ಮಾತ್ರೆಗಳಿಂದ ಐದು ಮಾತ್ರೆಗಳವರೆಗೆ ಆಯಾ ವಚನದ ಭಾವಕ್ಕೆ ತಕ್ಕಂತೆ ರೂಪಗೊಂಡಿರುವುದನ್ನು ಕಾಣಬಹುದು. ಅಷ್ಟುಮಾತ್ರಕ್ಕೆ ತ್ರಿಪದಿಯೊಂದಿಗೆ ಅವುಗಳನ್ನು ತಳಕು ಹಾಕುವುದು ಸೂಕ್ತವಲ್ಲ. ಏಳೆ, ತ್ರಿಪದಿ, ರಗಳೆ, ಷಟ್ಪದಿ ಇವುಗಳಲ್ಲಿ ಕನ್ನಡ ಛಂದಸ್ಸಿನ ಬೆಳವಣಿಗೆಯನ್ನು ಕಾಣಬಹುದಾದರೂ ವಚನಗಳನ್ನು ಹಾಗೆ ನಿರ್ದಿಷ್ಟ ಛಂದಸ್ಸಿನ ಕಟ್ಟಿಗೆ ಒಳಪಡಿಸುವಂತಿಲ್ಲ. ಆಧುನಿಕ ಕಾವ್ಯದಂತೆ ಅದು ಮುಕ್ತ ಛಂದಸ್ಸುವುಳ್ಳದ್ದು; ಮಾತಿನ ಲಯದಿಂದ ಕೂಡಿದ್ದು; "ಹೊಸಗನ್ನಡ ಛಂದಸ್ಸಿನ ಅನೇಕ ವೈಶಿಷ್ಟ್ಯಗಳು ಆ ವಚನಗಳಲ್ಲಿ ತಕ್ಕಮಟ್ಟಿಗೆ ದೊರೆಯುತ್ತವೆ" ಎಂದು ಇನ್ನೊಂದಡೆಯಲ್ಲಿ ಹೇಳಿದ ಡಾ|| ಎಂ. ಚಿದಾನಂದಮೂರ್ತಿಯವರ ಮಾತು ಒಪ್ಪುವಂತಹದು.

ಈ ಸಂದರ್ಭದಲ್ಲಿ ಬಸವಣ್ಣನವರೇ ಹೇಳಿದ ಒಂದು ಮಾತನ್ನು ಗಮನಿಸುವುದು ಅವಶ್ಯವೆನಿಸುತ್ತದೆ :

***ತಾಳಮಾನಸ ಸರಿಸವನರಿಯೆ, ಓಜೆ ಬಜಾವಣೆಯ ಲೆಕ್ಕವನರಿಯೆ***
***ಅಮೃತಗಣ ದೇವಗಣವನರಿಯೆ***
***ಕೂಡಲ ಸಂಗಮದೇವಾ, ನಿನಗೆ ಕೇಡಿಲ್ಲವಾಗಿ***
***ಅನುವೊಲಿದಂತೆ ಹಾಡುವೆ.***

ಯಾವ ತಾಳ, ಬಜಾವಣೆ, ಗಣಗಳಿಗೆ ಒಳಗಾಗದೆ, ಅವರು ಒಲಿದಂತೆ ಹಾಡಿದ ಹಾಡುಗಳೇ ವಚನಗಳು. ಆದ್ದರಿಂದ ಭಾವಕ್ಕೆ, ಅನುಭಾವಕ್ಕೆ ತಕ್ಕ ಲಯಗಳು ಇಲ್ಲಿಯವು ಎಂದು ಬೇರೆ ಹೇಳಬೇಕಾಗಿಲ್ಲ. ಕೈಗೆ ಸಿಕ್ಕ ಯಾವ ವಚನವನ್ನು ತೆಗೆದುಕೊಂಡು ನೋಡಿದರೂ ಅದು ಒಂದು ಸಂಪೂರ್ಣ





ಶಿಲ್ಪವಾಗುವುದರೊಳಗಾಗಿ ಬೇರೆ ಬೇರೆ ಮಾತ್ರಾಗಣ ಸಂಯೋಜನೆಯನ್ನು ಹೊಂದಿರುವುದನ್ನು ಕಾಣಬಹುದು.

ಬಸವಣ್ಣನವರ ವಚನಗಳು ಅವರು ಒಲಿದಂತೆ ಹಾಡಿದ ರೂಪಗಳಾಗಿದ್ದರೂ ಉಪಮೆ, ದೃಷ್ಟಾಂತ, ರೂಪಗಳಿಂದ ಕಂಗೊಳಿಸುತ್ತವೆ. ಅವರಲ್ಲಿರುವ ಕವಿತ್ವಶಕ್ತಿ ತಾನೇ ತಾನಾಗಿ ಅವುಗಳಲ್ಲಿ ಪ್ರಕಟಗೊಳ್ಳುತ್ತದೆ. ಉಪಮೆಗಳ ಬಳಕೆಯಲ್ಲಿಯಂತೂ ಅವರು ವಚನಕಾರರಲ್ಲಿಯೇ ಮುಂಚೂಣಿಯಲ್ಲಿ ನಿಲ್ಲುವಂಥವರು. ಎಂ.ಆರ್. ಶ್ರೀನಿವಾಸಮೂರ್ತಿಯವರು "ಉಪಮಾನಲಂಕಾರ ಪ್ರಯೋಗಕ್ಕೆ ಕನ್ನಡ ಸಾಹಿತ್ಯದಲ್ಲಿ ಬಸವಣ್ಣನಿಗೆ ಪ್ರಥಮಸ್ಥಾನ ದೊರೆಯಬೇಕು" ಎಂದಿರುವುದನ್ನು ಇಲ್ಲಿ ಗಮನಿಸಬೇಕು. ಬಸವಣ್ಣನವರ ಉಪಮೆಗಳ ಒಂದು ವೈಶಿಷ್ಟ್ಯವೆಂದರೆ ಅವುಗಳನ್ನು ಜೀವನದ ಅನುಭವದ ಸ್ತರಗಳಿಂದಲೇ ಎತ್ತಿಕೊಂಡಿರುವುದು. ಬಸವಣ್ಣನವರಿಗಿರುವ ಬದುಕಿನ ಗಾಢವಾದ, ವಿಸ್ತಾರವಾದ, ಸೂಕ್ಷ್ಮತರವಾದ ಅನುಭವವು ಅಸಾಧಾರಣವಾಗಿರುವುದನ್ನು ನಾವಿಲ್ಲಿ ಕಾಣಬಹುದು. ಉದಾಹರಣೆಗಾಗಿ ಈ ಕೆಳಗಿನ ಕೆಲವು ಉಪಮೆಗಳನ್ನು ನೋಡಬಹುದು:

ಮನಸ್ಸಿನ ಆಶೆ, ಆಮಿಷ, ಚಂಚಲತೆ, ಸಂಕೀರ್ಣತೆ ಮುಂತಾದವುಗಳನ್ನು ಚಿತ್ರಿಸುವಾಗ ಅವರು ನೀಡಿರುವ ಅರ್ಥಪೂರ್ಣ ಉಪಮೆಗಳು ಒಮ್ಮೆ ಓದಿದರೆ ಸಾಕು ಸದಾ ನೆನಪಿನಲ್ಲುಳಿಯುವಂತಹವು :

೧. **ಅಂದಣವನೇರಿದ ಸೊಣಗನಂತೆ ಕಂಡೊಡೆ ಬಿಡದು ಮನ್ನಿನ ಸ್ವಭಾವವನು.**
೨. **ಬೆಲ್ಲ ತಿಂದ ಕೋಡಗದಂತೆ ಸಿಹಿಯ ನೆನೆಯದಿರಾ ಮನವೆ.**
೩. **ಕಂಬಳಿಯಲ್ಲಿ ಕಣಕವ ನಾದಿದಂತೆ ಕಾಣರೇ ಎನ್ನ ಮನ.**
೪. **ಹಾವಿನ ಬಾಯ ಕಪ್ಪೆ ಹಾರುವ ನೊಣಕ್ಕೆ ಆಶೆ ಮಾಡಿದಂತೆ.**

ಮನಸ್ಸಿನ ಇಂಥ ಸ್ಥಿತಿಗಳನ್ನು ಉಪಮಿಸುವ ಬಸವಣ್ಣನವರು ಭಕ್ತಿಯನ್ನು ಕುರಿತು ತಿಳಿಯಪಡಿಸುವಾಗ, ಅನುಭಾವದ ಅಮೂರ್ತತೆಯನ್ನು ಶಬ್ದಚಿತ್ರಗಳಲ್ಲಿ ಹಿಡಿದಿಡುವಾಗ ಸಾಮಾಜಿಕವಾದ ಅನೇಕ ಸಂಗತಿಗಳನ್ನು ವ್ಯಕ್ತಪಡಿಸುವಾಗ ಸಾರ್ಥಕ ಉಪಮೆಗಳನ್ನು ನೀಡಿದ್ದುಂಟು. ಬಸವಣ್ಣನವರ ವಚನಗಳನ್ನು ಓದುತ್ತಿರುವಂತೆ ಅವೆಲ್ಲ ನಮ್ಮ ಕಣ್ಣಮುಂದೆ ಬರುತ್ತ ಹೋಗುತ್ತವೆ.

ಬಸವಣ್ಣನವರ ದೃಷ್ಟಾಂತಗಳು ತುಂಬ ಮನೋಜ್ಞವಾಗಿವೆ. ತತ್ತ್ವ ಚಿಂತನೆಯ ಯಾವ ವಿಚಾರವನ್ನು ಹೇಳಬೇಕಾದರೂ ದೃಷ್ಟಾಂತಗಳನ್ನು ಆಶ್ರಯಿಸುವುದು ಅಗತ್ಯವಾಗಿದೆ. ಬುದ್ಧನ ಜಾತಕ ಕಥೆಗಳು, ಪಂಚತಂತ್ರದ ಕಥೆಗಳು, ರಾಮಕೃಷ್ಣಪರಮಹಂಸರ ಸಾಮತಿಗಳು ಒಂದರ್ಥದಲ್ಲಿ ತತ್ತ್ವ ನಿರ್ದೇಶನ ಮಾಡುವ ದೃಷ್ಟಾಂತಗಳೇ ಆಗಿವೆ. ಆದರೆ ವಚನಕಾರರು ಕಥೆಗಳಿಗೆ ಮೊರೆಹೋಗದೆ, ತಮ್ಮ ವಚನ ರೂಪದ ಚೌಕಟ್ಟಿನಲ್ಲಿ ಸುಲಭಗ್ರಾಹ್ಯವಾದ ಹಲವಾರು ಅನುಭವಗಳ ಸೂಕ್ತಿಗಳನ್ನು ಹಿಡಿದಿಟ್ಟಿರುವರು. ಪ್ರಾಚೀನ ಕವಿಸಮಯ, ಪೌರಾಣಿಕ ಉದಾಹರಣೆಗಳಿಂದ ಮೊದಲಗೊಂಡು ತಮ್ಮ ಸಮಕಾಲೀನ ವಾಸ್ತವ ಬದುಕಿನಿಂದಲೂ ಅವರು ದೃಷ್ಟಾಂತಗಳನ್ನು ಆಯ್ದುಕೊಂಡಿರುವರು.

***ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ***
***ಅಂಬುಜಕೆ ಭಾನುವಿನ ಉದಯದ ಚಿಂತೆ***
***ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ***
***ಎನಗೆ ನಮ್ಮ ಕೂಡಲ-ಸಂಗಮದೇವರ ನೆನೆವುದೆ ಚಿಂತೆ.***

ಕೂಡಲಸಂಗಮ ದೇವರ ಬಗ್ಗೆ ತಮಗಿರುವ ಅನಿವಾರ್ಯವಾದ, ಅವಶ್ಯವಾದ ಚಿಂತೆಯನ್ನು ಇಲ್ಲಿ ಮೂರು ದೃಷ್ಟಾಂತಗಳಿಂದ ವಿವರಿಸಿರುವರು. ಈ ದೃಷ್ಟಾಂತಗಳು ಕವಿಸಮಯವನ್ನು ಪ್ರತಿನಿಧಿಸುತ್ತಿದ್ದರೂ ತುಂಬಾ ಪ್ರಭಾವಶಾಲಿಯಾದವುಗಳು. ತಟ್ಟನೆ ಮನಸ್ಸಿನ ಮೇಲೆ ಪರಿಣಾಮ ಬೀರುವ ಶಕ್ತಿ ಅವಕ್ಕಿರುವುದನ್ನು ಗಮನಿಸಬಹುದು.

***ಕಾಳಿದಾಸಂಗೆ ಕಣ್ಣ ನಿತ್ತೆ, ಓಹಿಲಯ್ಯನ ನಿಜಪುರಕ್ಕೊಯಿದೆ***
***ನಂಬಿ ಕರೆದೊಡೋ ಎಂದೆ***
***ತೆಲುಗು ಬೊಮ್ಮಯ್ಯಂಗೆ ಒಲಿದೆ ದೇವಾ***
***ಕೂಡಲಸಂಗಮದೇವಾ, ಎನ್ನನೇಕೆ ಒಲ್ಲೆಯಯ್ಯಾ ?***

ಈ ವಚನದಲ್ಲಿ ಶರಣರ ಸಾಧನೆ-ಸಿದ್ಧಿಗಳು ಪರಿಸರ ದೃಷ್ಟಾಂತಗಳ ರೂಪತಳೆದು ಶಿವಕೃಪೆಯ ವಿಶೇಷತೆಗಳು ಕಣ್ಣ ಮುಂದೆ ಬಂದು ನಿಲ್ಲುತ್ತವೆ. ಪುರಾಣಕತೆಯ ಲೇಪನವಿದ್ದರೂ

ಭಕ್ತಿಯ ಪರಾಕಾಷ್ಠೆಯನ್ನು ಸ್ಪಷ್ಟವಾಗಿ, ಅರ್ಥಪೂರ್ಣವಾಗಿ ಧ್ವನಿಸುತ್ತದೆ.

*ಮಡಿಕೆಯ ಮಾಡುವರೆ ಮಣ್ಣೇ ಮೊದಲು*
*ತೊಡುಗೆಯ ಮಾಡುವರೆ ಹೊನ್ನೇ ಮೊದಲು*
*ಶಿವಪಥವನರಿವರೆ ಗುರುಪಥವೇ ಮೊದಲು*
*ಕೂಡಲ ಸಂಗಮದೇವರನವರಿವರೆ ಶರಣ ಸಂಗಮ ಮೊದಲು*

ಇಲ್ಲಿಯ ಮಡಿಕೆ, ತೊಡುಗೆಗಳ-ದೃಷ್ಟಾಂತಗಳು ಅಪಾರ ದರ್ಶಕಗಳೇನೂ ಆಗಿಲ್ಲ. ವಚನಕಾರರು ದುರೂಹತೆಗೆ ಆಸ್ಪದವಿಲ್ಲವೆದಂತೆಯೇ ದೃಷ್ಟಾಂತಗಳನ್ನು ಬಳಸಿದ್ದಾರೆ. ಆದರೆ ಬೆಡಗಿನ ವಚನಗಳು ಜ್ಞಾನದ ಮತ್ತು ಅನುಭಾವದ ಸಾಧನೆಯನ್ನು ಬಯಸುತ್ತವೆ.

ಹಲವು ದೃಷ್ಟಾಂತಗಳನ್ನು ಅಲ್ಲಿಗಲ್ಲಿಗೆ ಸೃಷ್ಟಿಸಿಕೊಂಡ ಬಸವಣ್ಣನವರು ರೂಪಕಗಳನ್ನೂ ವಿಪುಲವಾಗಿ ಸೃಷ್ಟಿಸಿದ್ದಾರೆ. ವಚನಕಾರರಲ್ಲಿಯೇ ಅವರೊಬ್ಬ ಶ್ರೇಷ್ಠ ರೂಪಕ ಸೃಷ್ಟಿಕಾರರಾಗಿದ್ದಾರೆ. ಷಟ್ಪದಿ ಕಾವ್ಯಕ್ಕೆ ಕುಮಾರ ವ್ಯಾಸನಿರುವಂತೆ ವಚನ ಸಾಹಿತ್ಯಕ್ಕೆ ಬಸವಣ್ಣನವರೆಂದಿರುವ ಡಾ॥ ಜಿ.ಎಸ್. ಶಿವರುದ್ರಪ್ಪನವರು: ''ಕನ್ನಡ ಸಾಹಿತ್ಯದಲ್ಲಿ ನಾರಾಣಪ್ಪ, ಬಸವೇಶ್ವರ ಇವರಿಬ್ಬರ ಹಾಗೆ ಭಾಷೆಯ ಸಾಧ್ಯತೆಯನ್ನು ಸೂರೆ ಮಾಡಿದವರು ಹಾಗೂ ರೂಪಕ ನಿರ್ಮಾಣ ಮಾಡಿದವರು ವಿರಳವೆಂದೇ ಹೇಳಬೇಕು'' ಎಂದಿದ್ದಾರೆ. ಬಸವಣ್ಣನವರ ವಚನಗಳಲ್ಲಿ ಕಂಡುಬರುವ ಇನ್ನೊಂದು ವಿಶೇಷವೆಂದರೆ ಬಹುಸಂಖ್ಯೆಯಲ್ಲಿರುವ ಪ್ರಾಣಿ ರೂಪಕಗಳು. ಕಪ್ಪೆ, ಸರ್ಪ, ನಾಯಿ, ನರಿ, ಕರಿ, ಕುರಿ, ಕತ್ತೆ ಕೋಡಗ, ಬೆಕ್ಕು ಮುಂತಾದವುಗಳೆಲ್ಲ ಅವರ ರೂಪಕಗಳಲ್ಲಿ ಮನುಷ್ಯ ಸ್ವಭಾವದೊಂದಿಗೆ ಸಾಂಗತ್ಯಗೊಂಡು ವಿವಿಧ ಬಗೆಯ ಪಾತ್ರವಾಡಿವೆ. ಅಂತೆಯೇ ಪ್ರೊ. ಸುಜನಾ ಅವರು ''ಬಸವಣ್ಣನವರ ಪ್ರಾಣಿರೂಪಕಗಳು'' ಕುರಿತು ವಿವರವಾಗಿ ಆಲೋಚಿಸಿದ್ದುಂಟು. ಪ್ರಸ್ತುತದಲ್ಲಿ ಪ್ರಾಣಿರೂಪಕ್ಕೆ ಭಿನ್ನವಾದ ವೃಕ್ಷರೂಪಕದಲ್ಲಿ, ಬಸವಣ್ಣನವರು ಭಕ್ತನ (ತಮ್ಮ) ಇಡೀ ವ್ಯಕ್ತಿತ್ವವನ್ನು, ಶರಣರ ಜೀವನದ ಸಾಧನೆಯನ್ನು ಚಿತ್ರಿಸಿರುವುದನ್ನು ನೋಡಬಹುದು :

*ಭಕ್ತಿಯೆಂಬ ಪೃಥ್ವಿಯ ಮೇಲೆ ಗುರುವೆಂಬ ಬೀಜವಂಕುರಿಸಿ,*
*ಲಿಂಗವೆಂಬ ಎಲೆಯಾಯಿತ್ತು,*
*ಲಿಂಗವೆಂಬ ಎಲೆಯ ಮೇಲೆ*
*ವಿಚಾರವೆಂಬ ಹೂವಾಯಿತ್ತು*
*ಆಚಾರವೆಂಬ ಕಾಯಾಯಿತ್ತು*
*ನಿಷ್ಪತ್ತಿಯೆಂಬ ಹಣ್ಣಾಯಿತ್ತು*
*ನಿಷ್ಪತ್ತಿಯೆಂಬ ಹಣ್ಣು ತೊಟ್ಟು ಬಿಟ್ಟು ಕಳಚಿ ಬೀಳುವಲ್ಲಿ*
*ಕೂಡಲ ಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ.*

ಅನುಭವ, ಸಿದ್ಧಾಂತಗಳೆರಡನ್ನೂ ಏಕಕಾಲಕ್ಕೆ ನಿರೂಪಿಸುವ ಈ ರೂಪಕ ಒಂದು ದಾರ್ಶನಿಕ ರೂಪಕವೆಂದು ಹೇಳಬಹುದು. ಇದು ಒಂದರ್ಥದಲ್ಲಿ ವ್ಯಕ್ತಿನಿಷ್ಠವೂ ಅಹುದು. ಇನ್ನೊಂದರ್ಥದಲ್ಲಿ ತತ್ತ್ವ ನಿಷ್ಠವೂ ಆಹುದು. ದಾರ್ಶನಿಕ ಕಾವ್ಯ ಅತಿ ಮಾನಸದ ಸೃಷ್ಟಿಯೆಂದು ಶ್ರೀ ಅರವಿಂದರು ಹೇಳುವ ಮಾತು ಇಂಥ ರೂಪಕಗಳಿಗೂ ಅನ್ವಯಿಸದಿರದು.

ಬಸವಣ್ಣನವರ ವಚನಗಳ ಭಾಷೆ ಮತ್ತು ಭಾವದ ದೃಷ್ಟಿಯಿಂದಲೂ ಈ ಸಂದರ್ಭದಲ್ಲಿ ಒಂದು ಮಾತು ಹೇಳುವುದು ತೀರ ಅವಶ್ಯವೆನಿಸುತ್ತದೆ. ಅವರ ಭಾಷೆ ಬದುಕಿನ ಭಾಷೆ, ಜೀವಂತ ಭಾಷೆ, ಶ್ರೀಸಾಮಾನ್ಯನ ನಚ್ಚಿನ ಭಾಷೆ. ಅಲ್ಲಿ ಇಲ್ಲಿ ತಾತ್ತ್ವಿಕ ವಿವೇಚನಾ ಸಂದರ್ಭಗಳಲ್ಲಿ ಗ್ರಾಂಥಿಕ ಮತ್ತು ಸಂಸ್ಕೃತ ಮಿಶ್ರಿತ ಭಾಷೆಯಿರುವುದನ್ನು ಕಾಣಬಹುದು. ಗಾಳಿಪಟ ಆಕಾಶದೆತ್ತರಕ್ಕೆ ಹೋಗಿದ್ದರೂ ಅದರ ಸೂತ್ರ ನೆಲದ ಮೇಲೆ ನಿಂತನವ ಕೈಯಲ್ಲಿ ಇರುವಂತೆ ಬಸವಣ್ಣನವರು ಬಳಸಿದ ಭಾಷೆ ಎಷ್ಟೇ ಎತ್ತರಕ್ಕೆ ಹೋಗಿದ್ದರೂ ಮಣ್ಣಿನ ಮಕ್ಕಳ ಕೈಯಲ್ಲಿಯೇ ಇರುತ್ತದೆ. ವಚನಗಳ ಭಾವವಂತೂ ಭಕ್ತಿಯೇ ಸ್ಥಾಯಿಯಾಗಿರಿಸಿಕೊಂಡಿದ್ದು, ಭಕ್ತಿರಸವನ್ನು ವೆಗ್ಗಳವಾಗಿ ನೀಡುತ್ತವೆ.

ಒಟ್ಟಂದದಲ್ಲಿ ಬಸವಣ್ಣನವರು ಆತ್ಮಾನ್ವೇಷಣೆಯ ಪರಮಸಾಧಕರೂ ಅನುಭಾವಿಗಳೂ ಜೊತೆಗೆ ಅನನ್ಯ, ಸಮಾಜ ಸುಧಾರಕರೂ ಆಗಿದ್ದಾಗಲೂ ಪ್ರತಿಭಾವಂತ ಕವಿ, ವಚನಕಾರರೂ ಆಗಿರುವುದು ಕನ್ನಡದ ಭಾಗ್ಯ, ಭಾರತದ ಪುಣ್ಯ ವಿಶೇಷ.

☆

*ಜೀವನ ಒಂದು ರತ್ನವಿದ್ದಂತೆ; ಅದನ್ನು ಗೌರವಿಸಬೇಕು, ಅರಿತು ಬಾಳಬೇಕು. ಜೀವಿತಾವಧಿ ಪರಿಮಿತವಾದುದು. ಅಂತ್ಯ ಅನಿರೀಕ್ಷಿತವೆಂದು ಗ್ರಹಿಸಿ ನಡೆಯಬೇಕು.*

*- ಶ್ರೀವಾಣಿ*





## ಕಾಯಕಯೋಗಿ, ತ್ರಿವಿಧ ದಾಸೋಹಮೂರ್ತಿ ಶ್ರೀ.ಮ.ನಿ.ಪ್ರ. ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ 95ನೇ ಜನ್ಮದಿನೋತ್ಸವ - ಶ್ರೀ ಗುರುವಂದನಾ ಮಹೋತ್ಸವ

### ಗಾಂಧೀಜಿಯವರ ನಂತರ ಮಹಾಪುರುಷರ ಸಾಲಿನಲ್ಲಿ ನಿಲ್ಲುವ ಶ್ರೀ ಸಿದ್ಧಗಂಗಾ ಶ್ರೀಗಳು

- ಜಾರ್ಜ್ ಫರ್ನಾಂಡಿಸ್




ಶ್ರೀ ಜಾರ್ಜ್ ಫರ್ನಾಂಡಿಸ್ ಅವರಿಂದ ಉದ್ಘಾಟನಾ ಭಾಷಣಾ

ಎತ್ತೆತ್ತ ನೋಡಿದರು ಜನ ಸಾಗರ. ಎಲ್ಲರ ಮುಖದಲ್ಲಿಯೂ ಭಕ್ತಿ ಭಾವಗಳ, ಉತ್ಸಾಹ ಸಂಭ್ರಮಗಳ ಸಮ್ಮಿಳನ. ಇದು ಏಪ್ರಿಲ್ ೭ರಂದು ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಕಂಡುಬಂದ ಸುಂದರ ದೃಶ್ಯ. ಸಂದರ್ಭ : ತ್ರಿವಿಧ ದಾಸೋಹಮೂರ್ತಿ, ಪರಮವೈರಾಗ್ಯಮೂರ್ತಿ, ಕಾಯಕ ಯೋಗಿ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೯೫ನೇ ಜನ್ಮದಿನೋತ್ಸವ - ಶ್ರೀ ಗುರುವಂದನಾ ಮಹೋತ್ಸವ ಆಚರಣೆಯ ಸಡಗರ. ಭಕ್ತರು, ಅಭಿಮಾನಿಗಳು, ಶ್ರೀಮಠದ ಹಳೆಯ ವಿದ್ಯಾರ್ಥಿಗಳು ಈ ಶುಭ ಸಮಾರಂಭದಲ್ಲಿ ಭಾಗಿಗಳಾಗಿ ಜೀವನ ಧನ್ಯತೆಯನ್ನು ಪಡೆಯಲು ತಂಡೋಪ ತಂಡವಾಗಿ ಶ್ರೀಮಠಕ್ಕೆ ಆಗಮಿಸುತ್ತಿದ್ದ ದೃಶ್ಯ ಕಣ್ಣಿಗೆ ಹಬ್ಬ, ಮನಸ್ಸಿಗೆ ಹರ್ಷವನ್ನುಂಟು ಮಾಡುತ್ತಿತ್ತು.

ಏಪ್ರಿಲ್ ೭ರ ಭಾನುವಾರ ಬೆಳಗ್ಗೆ ೧೦-೩೦ಕ್ಕೆ ಸರಿಯಾಗಿ ಶ್ರೀ ಬಿ.ಎಸ್. ಮಲ್ಲಿಕಾರ್ಜುನಯ್ಯ ಅವರ ಪ್ರಾರ್ಥನೆಯೊಂದಿಗೆ ಕಾರ್ಯಕ್ರಮ ಆರಂಭವಾಯಿತು. ಶ್ರೀಮಠದ ಹಳೆಯ ವಿದ್ಯಾರ್ಥಿಗಳು, ತುಮಕೂರು ಜಿಲ್ಲಾ ಪಂಚಾಯತಿಯ

ಉಪಕಾರ್ಯದರ್ಶಿಗಳೂ ಆದ ಶ್ರೀ ಕೆ.ಎನ್. ಗೋವಿಂದ ರಾಜು ಅವರು ಎಲ್ಲರನ್ನು ಸ್ವಾಗತಿಸಿದರು.

ರಕ್ಷಣಾ ಸಚಿವರಾದ ಶ್ರೀ ಜಾರ್ಜ್ ಫರ್ನಾಂಡಿಸ್ ಅವರು ೯೫ ಜ್ಯೋತಿಗಳನ್ನು ಬೆಳಗಿಸುವುದರ ಮೂಲಕ ಗುರುವಂದನಾ ಸಮಾರಂಭವನ್ನು ಉದ್ಘಾಟಿಸಿದರು. ಅವರು ತಮ್ಮ ಭಾಷಣದಲ್ಲಿ ''ಶ್ರೀ ಸಿದ್ಧಗಂಗಾ ಶ್ರೀಗಳು ಪರಮ ದೈವೀಪುರುಷರು. ಅವರನ್ನು ಜನ ಪೂಜೆ ಮಾಡುತ್ತಾರೆ, ಅವರ ಸೇವೆ ನಮ್ಮ ದೇಶದ ಮುಂದಿದೆ. ಶಿಕ್ಷಣ ಸಂಸ್ಥೆಗಳನ್ನು ಸ್ಥಾಪನೆ ಮಾಡುವುದರ ಮೂಲಕ ವಿದ್ಯೆಯಿಂದ ವಂಚಿತರಾಗುತ್ತಿದ್ದ ಸಾವಿರಾರು ಜನ ಬಡ, ದೀನ, ದಲಿತ ವಿದ್ಯಾರ್ಥಿಗಳಿಗೆ ಜ್ಞಾನದಾಸೋಹ, ಅನ್ನದಾಸೋಹ ನೀಡುತ್ತಿರುವ ಮಹಾ ಪುರುಷರು'' ಎಂದು ಶ್ರೀಗಳವರ ಸೇವೆಯನ್ನು ಮುಕ್ತಕಂಠದಿಂದ ಶ್ಲಾಘಿಸಿದರು. ಅವರು ''ಪ್ರಸ್ತುತ ದೇಶ ಕ್ಲಿಷ್ಟದ ಪರಿಸ್ಥಿತಿ ಎದುರಿಸುತ್ತಿದ್ದು ಜಾತಿ, ಮತ, ಧರ್ಮಗಳ ಬೇಧ ಮರೆತು ರಾಷ್ಟ್ರ ಕಟ್ಟುವ ಕಾರ್ಯದಲ್ಲಿ ಎಲ್ಲರೂ ತೊಡಗಿಸಿಕೊಂಡಾಗ ಮಾತ್ರ ಸದ್ಯದ ಪರಿಸ್ಥಿತಿಯಿಂದ ಪಾರಾಗಲು ಸಾಧ್ಯ. ಭಾರತದ ಇತಿಹಾಸದಲ್ಲಿ ಗಾಂಧೀಜಿಯವರ ನಂತರ ಮಹಾಪುರುಷರ ಸಾಲಿನಲ್ಲಿ ನಿಲ್ಲುವ ಶ್ರೀ ಸಿದ್ಧಗಂಗಾ ಶ್ರೀಗಳವರ ಮಾರ್ಗದರ್ಶನ ಎಲ್ಲರಿಗೂ ದಾರಿದೀಪವಾಗಬೇಕು'' ಎಂದು ಆಶಿಸಿದರು.

ಶ್ರೀ ಫರ್ನಾಂಡಿಸ್ ಅವರು ತಮ್ಮ ಭಾಷಣದಲ್ಲಿ ಸದ್ಯದ ದೇಶದ ಪರಿಸ್ಥಿತಿಯನ್ನು ಪ್ರಸ್ತಾಪಿಸಿ ಜಾತಿ, ಮತ, ಧರ್ಮಗಳ ಹೆಸರಿನಲ್ಲಿ ದೇಶವನ್ನು ಹೊಡೆಯುವ ಕಾರ್ಯ ಒಂದೆಡೆಯಾಗುತ್ತಿದ್ದರೆ, ಇದಕ್ಕೆ ವಿರುದ್ಧವಾಗಿ ಸಾಮರಸ್ಯ ಮೂಡಿಸುವ ಮಹಾತ್ ಕಾರ್ಯ ಶ್ರೀಮಠದಿಂದ ಆಗುತ್ತಿದೆ ಎಂದು ತಿಳಿಸಿ ಜಾತಿವಾದದಿಂದ ಎಂತಹ ಪರಿಸ್ಥಿತಿ ಉದ್ಭವಿಸುತ್ತದೆ ಎನ್ನುವುದಕ್ಕೆ ಗುಜರಾತ್ ಘಟನೆ ನಮ್ಮ ಮುಂದೆ ಜೀವಂತ ನಿದರ್ಶನವಾಗಿ ಉಳಿದಿದೆ ಎಂದರು.



ಪರಮಪೂಜ್ಯ ಶ್ರೀ ಶ್ರೀಗಳವರು ಸಮಾಜಕ್ಕೆ ಸಲ್ಲಿಸುತ್ತಿರುವ ಸೇವೆಯ ಬಗ್ಗೆ, ಮಾಡಿರುವ ಸಾಧನೆಯ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದ ಶ್ರೀ ಜಾರ್ಜ್ ಫರ್ನಾಂಡಿಸ್ ಅವರು ಪೂಜ್ಯ ಶ್ರೀ ಶ್ರೀಗಳವರ ಜೀವನ ನಮಗೆ ಆದರ್ಶವಾಗಿದೆ, ಅವರ ಒಂದೊಂದು ದಿನವೂ ಒಂದು ಸಾವಿರ ದಿನಗಳಾಗ ಬೇಕೆಂಬುದು ನಮ್ಮ ಬಯಕೆಯಾಗಿದೆ. ವ್ಯಕ್ತಿ ಸಂಕಲ್ಪದಿಂದ ಮಹತ್ವವಾದುದನ್ನು ಸಾಧಿಸಬಹುದು ಎಂಬುದಕ್ಕೆ ಶ್ರೀಗಳವರ ದಿನಚರಿಯೆ ನಮಗೆ ಮಾರ್ಗದರ್ಶನವಾಗಿದೆ. ಇಂತಹ ದಿವ್ಯಚೇತನ ನೂರು ಕಾಲ ಬದುಕಲಿ ಎಂದು ಶುಭಹಾರೈಸಿದರು.

*ಭಕ್ತಿ ಸಮರ್ಪಣೆ*

ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ತಮ್ಮ ಭಕ್ತಿ ಸಮರ್ಪಣೆಯಲ್ಲಿ ಪೂಜ್ಯ ಶ್ರೀ ಶ್ರೀಗಳವರ ಸೇವೆಯನ್ನು ಭಕ್ತಿಯಿಂದ ಸ್ಮರಿಸಿ ಆತ್ಮವಲೋಕನ ಮಾಡಬೇಕಾದ ಕಾಲ ಇದಾಗಿದೆ ಎಂದು ತಿಳಿಸಿದರು.

*ನರ್ಸಿಂಗ್ ಕಾಲೇಜು ನೂತನ ಕಟ್ಟಡ ಉದ್ಘಾಟನೆ*

ಮಾನ್ಯ ಮುಖ್ಯಮಂತ್ರಿ ಶ್ರೀ ಎಸ್.ಎಂ. ಕೃಷ್ಣ ಅವರು ನರ್ಸಿಂಗ್ ಕಾಲೇಜಿನ ನೂತನ ಕಟ್ಟಡವನ್ನು ಉದ್ಘಾಟಿಸಿದರು. ಅವರು ತಮ್ಮ ಭಾಷಣದಲ್ಲಿ ''ಕ್ರೌರ್ಯ, ದ್ವೇಷ, ಈರ್ಷೆ, ಹಿಂಸಾಚಾರದ ಸದ್ಯದ ಪರಿಸ್ಥಿತಿಯನ್ನು ನೋಡಿದರೆ ಇಂತಹ ವೈಪರೀತ್ಯಗಳನ್ನು ನಿಯಂತ್ರಣಕ್ಕೆ ತರಲು ಶ್ರೀ ಸಿದ್ಧಗಂಗೆಯ ಸಿದ್ಧಪುರುಷರೆನಿಸಿದ ಮಹಾತ್ಮರಿಂದಷ್ಟೆ ಸಾಧ್ಯ'' ಎಂದು ಅಭಿಪ್ರಾಯಪಟ್ಟರು. ಅವರು ''ಈ ದೇಶದ ನಾಡು, ನುಡಿ ಶ್ರದ್ಧೆ ಭಕ್ತಿಗಳಿಗೆ ಹೆಸರಾಗಿರುವ ಪರಮಪೂಜ್ಯ ಶ್ರೀ ಶ್ರೀಗಳವರ ಧಾರ್ಮಿಕ ಚಿಂತನೆಗಳು ನಮಗೆ ಸಿಲುಕದ ವಿಚಾರಗಳಾಗಿದ್ದು ಇಂತಹ ದಿವ್ಯ ಆದರ್ಶಗಳನ್ನು ಪಾಲಿಸಲು'' ಜನತೆಗೆ ಕರೆ ನೀಡಿದರು.








ಮುಖ್ಯಮಂತ್ರಿಗಳು ನಮ್ಮ ಒಳ್ಳೆಯ ಕಾರ್ಯಗಳನ್ನು ಆಶೀರ್ವದಿಸಿ, ಎಡವಿದಾಗ ತಿದ್ದಿ ಬುದ್ದಿ ಹೇಳಿ ಎಂದು ಪೂಜ್ಯ ಶ್ರೀಗಳವರಲ್ಲಿ ಮಾನವಿ ಮಾಡಿಕೊಂಡರು. ಮಕ್ಕಳಿಗೆ ಯೋಗ್ಯವಾಗ ಶಿಕ್ಷಣ ನೀಡುವ ತಪಸ್ಸನ್ನು ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಮಾಡುತ್ತಿರುವ ಬಗ್ಗೆ ಶ್ಲಾಘಿಸಿದ ಶ್ರೀ ಎಸ್.ಎಂ. ಕೃಷ್ಣ ಅವರು ಅಭಿನವ ಬಸವೇಶ್ವರರೆಂದೇ ಕರೆಯುವ ಸಿದ್ಧಗಂಗಾ ಶ್ರೀಗಳನ್ನು ರಾಜ್ಯದ ಐದು ಕೋಟಿ ಕನ್ನಡಿಗರ ಪರವಾಗಿ ತೊಂಬತ್ತೈದನೆ ಹುಟ್ಟು ಹಬ್ಬದ ಅಭಿನಂದನೆ ಸಲ್ಲಿಸಿದರು.

*ಸಿದ್ಧಗಂಗಾ ವಿಶೇಷ ಸಂಚಿಕೆ ಬಿಡುಗಡೆ*

ಲೋಕೋಪಯೋಗಿ ಸಚಿವ ಶ್ರೀ ಧರ್ಮಸಿಂಗ್ ಅವರು ಸಿದ್ಧಗಂಗಾ ವಿಶೇಷ ಸಂಚಿಕೆಯನ್ನು ಬಿಡುಗಡೆ ಮಾಡಿ ಮಾತನಾಡುತ್ತಾ ಪರಮಪೂಜ್ಯ ಶ್ರೀ ಶ್ರೀಗಳವರು ಜಾತಿಬೇಧವಿಲ್ಲದೆ ಸಾವಿರಾರು ಜನ ಬಡ ವಿದ್ಯಾರ್ಥಿಗಳಿಗೆ ವಿದ್ಯಾಭ್ಯಾಸ ಮಾಡಲು ಅವಕಾಶ ಕಲ್ಪಿಸಿಕೊಟ್ಟಿದ್ದಾರೆ. ಬಸವಣ್ಣನವರ ಸಿದ್ಧಾಂತಗಳನ್ನು ಶ್ರೀಗಳವರು ಅನುಷ್ಠಾನ ಗೊಳಿಸುತ್ತಿದ್ದಾರೆ ಎಂದು ತಿಳಿಸಿದರು.

*ನುಡಿಬೆಳಕು ಗ್ರಂಥ ಬಿಡುಗಡೆ*

ಜಲ ಸಂಪನ್ಮೂಲ ಸಚಿವ ಶ್ರೀ ಹೆಚ್.ಕೆ. ಪಾಟೀಲ್ ಅವರು ''ನುಡಿಬೆಳಕು''ಗ್ರಂಥವನ್ನು ಬಿಡುಗಡೆ ಮಾಡಿ ತ್ರಿವಿಧ ದಾಸೋಹಗಳ ಮೂಲಕ ಕರ್ನಾಟಕಕ್ಕೆ ಕೀರ್ತಿ ತಂದ ಮಹಾನ್ ತಪಸ್ವಿ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ತತ್ವ ಆದರ್ಶಗಳು ಎಲ್ಲರಿಗೂ ಮಾರ್ಗದರ್ಶಕವಾಗಿರಲಿ, ಎಲ್ಲಾ ವರ್ಗದವರ ಏಳಿಗೆಗೆ ಆಹರ್ನಿಶಿ ದುಡಿಯುತ್ತಿರುವ ಪೂಜ್ಯ ಶ್ರೀಗಳವರ ಸೇವೆ ನಮ್ಮ ದೇಶಕ್ಕೆ ದೊಡ್ಡ ಕೊಡುಗೆ. ಅವರ ಶತಮಾನೋತ್ಸವ ಸಂದರ್ಭದಲ್ಲಿ ಪಾಲ್ಗೊಳ್ಳುವ ಸದಾವಕಾಶ ನಮ್ಮದಾಗಲಿ ಎಂದು ಶುಭ ಹಾರೈಸಿದರು.

*ನುಡಿನಮನ*

ನುಡಿನಮನ ಸಲ್ಲಿಸಿದ ಪ್ರದೇಶ ಕಾಂಗ್ರೆಸ್ ಅಧ್ಯಕ್ಷ ಶ್ರೀ ಅಲ್ಲಂ ವೀರಭದ್ರಪ್ಪ ಅವರು ''ಸಿದ್ಧಗಂಗೆಯ ಸಿದ್ಧಯೋಗಿಗಳ ಸೇವೆ ಕಲ್ಯಾಣ ದಿನಗಳನ್ನು ನೆನಪಿಗೆ ತರುತ್ತಿವೆ, ಪೂಜ್ಯ ಶ್ರೀಗಳವರು ಶಿಕ್ಷಣ ಮತ್ತು ಅನ್ನದಾನವನ್ನು ನಿರಂತರವಾಗಿ ನಡೆಸಿಕೊಂಡು ಬರುತ್ತಿದ್ದಾರೆ. ಅವರ ದರ್ಶನ ಭಾಗ್ಯ ನಮ್ಮ ಪುಣ್ಯ ವಿಶೇಷ'' ಎಂದು ತಿಳಿಸಿದರು.

ಶಾಸಕ ಶ್ರೀ ವಿ. ಸೋಮಣ್ಣ, ಸಂಸದ ಶ್ರೀ ಎಂ.ವಿ. ರಾಜಶೇಖರನ್ ಅವರು ಮಾತನಾಡಿ ಪರಮಪೂಜ್ಯ ಶ್ರೀ ಶ್ರೀಗಳವರು ದೇಶಕ್ಕಾಗಿ ಸಲ್ಲಿಸುತ್ತಿರುವ ಅನುಪಮ ಸೇವೆಯನ್ನು ಮುಕ್ತಕಂಠದಿಂದ ಶ್ಲಾಘಿಸಿದರು.

ಮಾಹಿತಿ ತಂತ್ರಜ್ಞಾನ ಸಚಿವ ಪ್ರೊ. ಬಿ.ಕೆ. ಚಂದ್ರಶೇಖರ್ ಅವರು ಮಾತನಾಡಿ ಪೂಜ್ಯ ಶ್ರೀ ಶ್ರೀಗಳವರು ವಿದ್ಯಾದಾನ,





ಸುತ್ತೂರು ಜಗದ್ಗುರು ಅವರಿಂದ ಆಶೀರ್ವಚನ

ಅನ್ನದಾನದ ಮೂಲಕ ನಾಡಿಗೆ ಸಲ್ಲಿಸುತ್ತಿರುವ ಸೇವೆಯ ಬಗ್ಗೆ ಸಮಸ್ತ ಕನ್ನಡಿಗರಿಗೆ ಗೊತ್ತಿದೆ. ಸರ್ಕಾರ ಮಾಡಬೇಕಾದ ಕೆಲಸವನ್ನು ಶ್ರೀಗಳವರು ಮಾಡುತ್ತಿದ್ದಾರೆ ಎಂದು ಅಭಿನಂದಿಸಿದ ಸಚಿವರು ಗುಜರಾತಿನಲ್ಲಿ ಪ್ರತಿದಿನ ನಡೆಯುತ್ತಿರುವ ಹತ್ಯಾಕಾಂಡದ ಬಗ್ಗೆ ತಮ್ಮ ನೋವು ಹಾಗೂ ವಿಷಾದವನ್ನು ವ್ಯಕ್ತಪಡಿಸಿದರು.

ಸಮಾರಂಭದ ದಿವ್ಯಸಾನ್ನಿಧ್ಯ ವಹಿಸಿದ್ದ ಶ್ರೀ ತೋಂಟದಾರ್ಯ ಮಹಾಸಂಸ್ಥಾನದ ಮಠದ ಅಧ್ಯಕ್ಷರಾದ ಜಗದ್ಗುರು ಶ್ರೀಮನ್ನಿರಂಜನ ಪ್ರಣವಸ್ವರೂಪಿ ಡಾ. ಶ್ರೀ ಶ್ರೀ ತೋಂಟದಾರ್ಯ ಸಿದ್ಧಲಿಂಗ ಮಹಾಸ್ವಾಮಿಗಳವರು ತಮ್ಮ ಆಶೀರ್ವಚನದಲ್ಲಿ ಸಿದ್ಧಗಂಗಾ ಮಠದ ಪರಂಪರೆ ಹಾಗೂ ಶ್ರೀ ಶ್ರೀಗಳವರು ಸಲ್ಲಿಸುತ್ತಿರುವ ಸೇವೆಯ ಬಗ್ಗೆ ಮುಕ್ತಕಂಠದಿಂದ ಶ್ಲಾಘಿಸಿದರು. ಮಾನವ ಜಗತ್ತನ್ನು ಗೆಲ್ಲಬೇಕಾದರೆ ಜನಪರ ಕಾರ್ಯಗಳತ್ತ ಒಲವು ತೋರಬೇಕು ಎಂದು ತಿಳಿಸಿದ ಶ್ರೀ ಶ್ರೀಗಳವರು ಈ ನಿಟ್ಟಿನಲ್ಲಿ ಶಾಂತಿ, ಸಹನೆ, ಸಂಯಮ ಅಗತ್ಯ ಎಂದು ಅಭಿಪ್ರಾಯಪಟ್ಟರು.

ಅವರು ತಮ್ಮ ಆಶೀರ್ವಚನದಲ್ಲಿ ''ಇಂದಿನ ದಿನಗಳಲ್ಲಿ ಜನಪ್ರತಿನಿಧಿ ಎನಿಸಿಕೊಂಡವನು ಜಾತಿ ಪ್ರತಿಷ್ಠೆಯನ್ನು ತೋರದೆ ಜಂಗಮ ತತ್ವವನ್ನು ಅನುಸರಿಸಬೇಕು, ಈ ನಿಟ್ಟಿನಲ್ಲಿ ಸಮಾಜದ ವಾರಸುದಾರ ಎನಿಸಿಕೊಳ್ಳಬೇಕಾದರೆ ಸುಸಂಸ್ಕೃತದ ಜೊತೆಗೆ ತ್ಯಾಗಮಹಿಯಾಗಿರಬೇಕು'' ಎಂದು ಕರೆ ನೀಡಿದರು.

### ಸನ್ಮಾನ

ಇದೇ ಸಂದರ್ಭದಲ್ಲಿ ನಾಡಿನ ವಿವಿಧ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿದ ರಾಜ್ಯಸಭಾ ಸದಸ್ಯೆ ಡಾ. ಪಿ. ಸೆಲ್ವಿದಾಸ್, ರಾಜೀವ್ ಗಾಂಧಿ ಆರೋಗ್ಯ ವಿಶ್ವವಿದ್ಯಾನಿಲಯದ ಕುಲಪತಿ ಡಾ. ಚಂದ್ರಶೇಖರ ಶೆಟ್ಟಿ, ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷ ಡಾ. ಗುರುಲಿಂಗ ಕಾಪಸೆ, ಹಾಸನ ಜಿಲ್ಲೆಯ ಬಾಳ್ಳುಪೇಟೆಯ ಕಾಫಿ ಪ್ಲಾಂಟರ್ಸ್ ಶ್ರೀ ಬಿ.ಎಸ್. ದೇವರಾಜ್ ಅವರಿಗೆ ಪರಮಪೂಜ್ಯ ಶ್ರೀ ಶ್ರೀಗಳವರು ಶಾಲು ಹೊದಿಸಿ ನೆನಪಿನ ಕಾಣಿಕೆ ನೀಡಿ ಸನ್ಮಾನಿಸಿದರು.

### ಅಧ್ಯಕ್ಷ ಭಾಷಣ

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಸುತ್ತೂರು ವೀರಸಿಂಹಾಸನ ಮಹಾಸಂಸ್ಥಾನ ಮಠದ ಅಧ್ಯಕ್ಷರಾದ ಜಗದ್ಗುರು ಶ್ರೀ ಶ್ರೀ ಶಿವರಾತ್ರಿದೇಶೀಕೇಂದ್ರ ಮಹಾಸ್ವಾಮಿಗಳವರು ತಮ್ಮ ಆಶೀರ್ವಚನ ನುಡಿಗಳಲ್ಲಿ ''ಪರಮಪೂಜ್ಯ ಶ್ರೀ ಶ್ರೀಗಳವರದು ಮೇರು ಸದೃಶ್ಯವಾದ ವ್ಯಕ್ತಿತ್ವ. ಇಲ್ಲಿ ನಡೆಯುವ ದಾಸೋಹ ಅದ್ಭುತ, ಆಶ್ಚರ್ಯ ಹಾಗೂ ಪವಾಡ. ಶ್ರೀಗಳವರು ಜ್ಞಾನದಾಸೋಹ, ಅನ್ನದಾಸೋಹದ ಮೂಲಕ ನಿಜವಾದ ಪವಾಡವನ್ನು ತೋರಿಸುತ್ತಿದ್ದಾರೆ. ಬದುಕಿನ ಪ್ರತಿಯೊಂದು ಕ್ಷಣವನ್ನು ಸಮಾಜ ಸೇವೆಗಾಗಿ ಅರ್ಥಪೂರ್ಣವಾಗಿ ವಿನಿಯೋಗಿಸುತ್ತಿದ್ದಾರೆ. ಮಠಾಧಿಪತಿಗಳಿಗೆ ಆದರ್ಶವಾಗಿದ್ದಾರೆ; ಸ್ಫೂರ್ತಿಯಾಗಿದ್ದಾರೆ. ಆಧ್ಯಾತ್ಮಿಕ ಸೌರಭವನ್ನು ಸಮಾಜಕ್ಕೆ ಪ್ರಸರಿಸುತ್ತಿದ್ದಾರೆ'' ಎಂದು ನುಡಿದರು.

ಪರಮಪೂಜ್ಯ ಶ್ರೀ ಶ್ರೀಗಳವರು ತಮ್ಮ ಆಶೀರ್ವಚನದಲ್ಲಿ ''ಸಂಸ್ಕೃತಿಯೆಂಬುದು ಆತ್ಮ ವ್ಯವಸಾಯದ ಫಲ, ನಾಗರಿಕತೆ ಸಂಸ್ಕೃತಿಯಾಗಬೇಕಾದರೆ ಅದರಲ್ಲಿ ಆಧ್ಯಾತ್ಮಿಕ ಒಳ್ಳೆಯತನ ಸೇರಬೇಕು, ಒಳ್ಳೆಯ ತನವೇ ಸಂಸ್ಕೃತಿಯ ಸಾರ'' ಎಂದು ತಿಳಿಸಿದರು. (ಪೂಜ್ಯ ಶ್ರೀ ಶ್ರೀಗಳವರ ಆಶೀರ್ವಚನದ ಪೂರ್ಣ ಪಾಠವನ್ನು ಪ್ರತ್ಯೇಕವಾಗಿ ಕೊಡಲಾಗಿದೆ).

ವೇದಿಕೆಯಲ್ಲಿ ಸಂಸದ ಶ್ರೀ ಜಿ.ಎಸ್. ಬಸವರಾಜು, ಸಚಿವ ಶ್ರೀ ಎ. ಕೃಷ್ಣಪ್ಪ ಶ್ರೀ ಡಿ.ಬಿ. ಇನಾಂದಾರ್, ಶಾಸಕರಾದ ಶ್ರೀ ವಿ. ಸೋಮಣ್ಣ ಶ್ರೀ ಹೆಚ್.ಎಂ. ರೇವಣ್ಣ, ಶ್ರೀ ಎಸ್. ಶಿವಣ್ಣ ಶ್ರೀ ಕೆ. ಷಡಾಕ್ಷರಿ, ಶ್ರೀ ಸಿ. ಚೆನ್ನಿಗಪ್ಪ, ಶ್ರೀ ಎಸ್.ಪಿ.





ಮುದ್ದಹನುಮೇಗೌಡ, ಶ್ರೀ ಎಂ.ಡಿ. ಲಕ್ಷ್ಮೀನಾರಾಯಣ, ಶ್ರೀ ಎಸ್. ಚನ್ನಬಸವಯ್ಯ, ಡಾ. ಶಿವಯೋಗಿಸ್ವಾಮಿ, ನಗರಸಭಾ ಅಧ್ಯಕ್ಷ ಶ್ರೀ ಟಿ.ಪಿ. ಮಂಜುನಾಥ್, ಎ.ಪಿ.ಎಂ.ಸಿ. ಅಧ್ಯಕ್ಷ ಶ್ರೀ ಪಂಚಾಕ್ಷರಯ್ಯ, ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಶ್ರೀ ರೆಡ್ಡಿ ಚೆನ್ನೆಲ್ಲಪ್ಪ, ಜಿಲ್ಲಾ ಪಂಚಾಯತ್ ಮಾಜಿ ಅಧ್ಯಕ್ಷೆ ಶ್ರೀಮತಿ ದಾಕ್ಷಾಯಣಿ ಆಶ್ವತ್ಥ, ಜಿಲ್ಲಾಧಿಕಾರಿ ಶ್ರೀ ಬಿ.ಆರ್. ಜಯರಾಮರಾಜೇ ಆರಸ್, ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿ ಶ್ರೀ ಆರ್. ಹಿತೇಂದ್ರ ಮೊದಲಾದ ಗಣ್ಯರು ಉಪಸ್ಥಿತರಿದ್ದರು.

ಶ್ರೀ ಕೆ. ಬಸವರಾಜು ಅವರು ಶರಣು ಸಮರ್ಪಣೆ ಮಾಡಿದರು. ವಿದ್ವಾನ್ ಎಂ. ಶಿವಕುಮಾರಸ್ವಾಮಿ ಕಾರ್ಯಕ್ರಮ ನಿರೂಪಿಸಿದರು.

## ಸಾಹಿತ್ಯ ಸಮ್ಮೇಳನ



ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಸಿದ್ಧಲಿಂಗಸ್ವಾಮಿಗಳವರಿಂದ ಆಶೀರ್ವಚನ ವೇದಿಕೆಯಲ್ಲಿ : ಮಾಜಿ ಸಚಿವ ಹಾಗೂ ಶಾಸಕರಾದ ಶ್ರೀ ಎಂ.ಪಿ. ಪ್ರಕಾಶ್, ಡಾ. ಗುರುಲಿಂಗ ಕಾಪಸೆ, ಡಾ. ಎಂ. ಶಿವಕುಮಾರಸ್ವಾಮಿ, ಶ್ರೀ ಶುಭಚಂದ್ರ ಮೊದಲಾದ ಗಣ್ಯರನ್ನು ಹಾಗೂ ಹರಗುರು ಚರಮೂರ್ತಿಗಳನ್ನು ಕಾಣಬಹುದು

ದಿನಾಂಕ ೭-೪-೨೦೦೨ ರಂದು ಗುರುವಂದನಾ ಸಮಾರಂಭದ ಅಂಗವಾಗಿ ಸಾಹಿತ್ಯ ಸಮ್ಮೇಳನವನ್ನು ಏರ್ಪಡಿಸಲಾಗಿತ್ತು. ಮಾಜಿ ಸಚಿವರು ಹಾಗೂ ವಿಧಾನ ಪರಿಷತ್ ಸದಸ್ಯರಾದ ಮಾನ್ಯ ಶ್ರೀ ಎಂ.ಪಿ. ಪ್ರಕಾಶ್ ಅವರು ಸಮ್ಮೇಳನವನ್ನು ಉದ್ಘಾಟಿಸುತ್ತ, ಸಾಹಿತ್ಯ ಜೀವನಾನುಭವಗಳ ಅಳಿಯಲಾರದ ಅನರ್ಘ್ಯ ಸಂಪತ್ತು. ಸಾಹಿತ್ಯ ಸಿರಿಯಿಂದ ಸಾಂಸ್ಕೃತಿಕ ಶ್ರೀಮಂತಿಕೆ ಹೆಚ್ಚುತ್ತದೆ, ಕನ್ನಡ ಸಾಹಿತ್ಯದ ಹಿರಿಮೆಗೆ ಕಾರಣವಾಗಿರುವ ವಚನ ಸಾಹಿತ್ಯ ಎಲ್ಲ ಕಾಲಕ್ಕೂ ಪ್ರಸ್ತುತವಾದುದೆಂದು ನುಡಿದರು.

''ವಚನಗಳಲ್ಲಿ ಶರಣರ ಅಸಂಗ್ರಹತತ್ವ''ವನ್ನು ಕುರಿತು ಉಪನ್ಯಾಸ ನೀಡಿದ ಮೈಸೂರು ವಿಶ್ವವಿದ್ಯಾನಿಲಯದ ಜೈನ ಸಿದ್ಧಾಂತ ಪೀಠದ ಪ್ರಾಧ್ಯಾಪಕರಾದ ಶ್ರೀ ಶುಭಚಂದ್ರ ಅವರು ದಾಸಿಮಯ್ಯನವರ ''ಕರಿಯನಿತ್ತಡೆ ಒಲ್ಲೆ'' ಎಂಬ ವಚನವನ್ನು ಉದ್ಧರಿಸುತ್ತ, ಮುಂದುವರಿದು ಆಯ್ದಕ್ಕಿ ಲಕ್ಕಮ್ಮ ಮಾರಯ್ಯಗಳ' ಉದಾಹರಣೆಯೊಂದಿಗೆ 'ಸಂಗ್ರಹ' ಮೋಹಕ್ಕೆ, ಆತ್ಮನಾಶಕ್ಕೆ, ದೇವರಲ್ಲಿ ಅಪನಂಬಿಕೆಗೆ ಕಾರಣವಾಗುತ್ತದೆಂದು ಹೇಳಿದರು.

ಬೆಂಗಳೂರು ವಿಶ್ವವಿದ್ಯಾಲಯದ ಸಂಸ್ಕೃತ ನಿವೃತ್ತ ಪ್ರಾಧ್ಯಾಪಕರಾದ ಡಾ|| ಎಂ. ಶಿವಕುಮಾರಸ್ವಾಮಿಯವರು ಷಟ್‌ಸ್ಥಲ ಸಿದ್ಧಾಂತ ವೈಜ್ಞಾನಿಕ ನೆಲೆಗಟ್ಟಿನ ಮೇಲೆ ಎದ್ದು ನಿಂತಿರುವ ಅರಿವು-ಆಚಾರ-ಅನುಭಾವಗಳ ಸಂಗಮ ಸಿದ್ಧಾಂತವೆಂದು ನುಡಿದರು.

ಡಾ|| ಗುರುಲಿಂಗ ಕಾಪಸೆಯವರು ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದರು. ಶ್ರೀಯುತರು ಅಧ್ಯಕ್ಷ ಪೀಠದಿಂದ ಶರಣರ ಅನುಭಾವವೆಂಬುದು ಸಹಜ ಯೋಗದ ಶಿವದ್ರವ್ಯ. ಅನುಭಾವವೆಂಬುದು ಅಂತರಂಗದ ರತ್ನ ಎನ್ನುತ್ತ, ಶ್ರೀ ಸಿದ್ಧಗಂಗಾ ಮಠ ಮತ್ತು ಪೂಜ್ಯ ಶ್ರೀಗಳು ಅನುಭಾವದ ಅನನ್ಯ ಕಲಶವಾಗಿ ಕಂಗೊಳಿಸುತ್ತಿರುವುದು ನಾಡಿಗೆ ಪುಣ್ಯ ಎಂದರು. ಸಮಾರಂಭದ ಸಾನ್ನಿಧ್ಯನ್ನು ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಸಿದ್ಧಲಿಂಗ ಸ್ವಾಮಿಗಳು ವಹಿಸಿದ್ದು, ಆಶೀರ್ವಚನ ನೀಡಿದರು. ಶ್ರೀ ಪಿ.ಎನ್. ಚಂದ್ರಶೇಖರಯ್ಯ ಸ್ವಾಗತಿಸಿದರು. ಶ್ರೀ ಶಿವಕುಮಾರ್ ವಂದನೆ ಸಲ್ಲಿಸಿದರು. ಶ್ರೀ ಕೆ. ಬಸವರಾಜು ಕಾರ್ಯಕ್ರಮವನ್ನು ನಿರೂಪಿಸಿದರು.

*ವರದಿ: ಎಚ್.ಎಸ್. ಸಿದ್ಧಗಂಗಪ್ಪ*

## ರಾಜ್ಯಪಾಲರಿಂದ ಅಂಧ ಮಕ್ಕಳ ಪಾಠ ಶಾಲೆಯ ನೂತನ ಕಟ್ಟಡದ ಉದ್ಘಾಟನೆ




ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ರಾಜ್ಯಪಾಲರಾದ ಶ್ರೀಮತಿ ವಿ.ಎಸ್. ರಮಾದೇವಿ ಅವರು ಅಂಧ ಮಕ್ಕಳ ಪಾಠಶಾಲೆಯ ನೂತನ ಕಟ್ಟಡವನ್ನು ಉದ್ಘಾಟಿಸುತ್ತಿರುವುದು. ಈ ಸಂದರ್ಭದಲ್ಲಿ ಸಚಿವರಾದ ಶ್ರೀ ಡಿ.ಬಿ. ಚಂದ್ರೇಗೌಡ, ಶ್ರೀ ಟಿ.ಬಿ. ಜಯಚಂದ್ರ, ಶ್ರೀಮತಿ ಮೋಟಮ್ಮ ಮತ್ತು ಶ್ರೀಮತಿ ರಾಣಿ ಸತೀಶ್ ಅವರು ಉಪಸ್ಥಿತರಿದ್ದರು

ದಿನಾಂಕ ೮-೪-೨೦೦೨ ರಂದು ಅಂಧ ಮಕ್ಕಳ ಪಾಠ ಶಾಲೆಯ ಕಟ್ಟಡವನ್ನು ರಾಜ್ಯಪಾಲರಾದ ಘನತೆವೆತ್ತ ಶ್ರೀಮತಿ ವಿ.ಎಸ್. ರಮಾದೇವಿಯವರು ಉದ್ಘಾಟಿಸಿ, ''ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಸ್ವಾಮಿ ಯವರನ್ನು ನೋಡಿದಾಗ ನನಗೆ ಶಿರಡಿ ಸಾಯಿಬಾಬರ ನೆನಪಾಗುತ್ತದೆ. ಮಹಾತ್ಮರ ಸಾಲಿನಲ್ಲಿ ಕಂಗೊಳಿಸುತ್ತಿರುವ ಶ್ರೀಗಳು ನಾಡಿನ ಭಾಗ್ಯವಾಗಿದ್ದಾರೆ. ನಾನು ಮುಂಬರುವ ಜುಲೈನಲ್ಲಿ ನಿವೃತ್ತಳಾಗುತ್ತಿದ್ದೇನೆ. ನನ್ನ ನಿವೃತ್ತ ಜೀವನದಲ್ಲಿ ಶ್ರೀಮಠವನ್ನು, ಶ್ರೀಗಳವರನ್ನು, ಕನ್ನಡಿಗರ ಪ್ರೀತಿ ವಿಶ್ವಾಸಗಳನ್ನು ಸದಾ ಸ್ಮರಿಸುತ್ತೇನೆ'' ಎಂದು ನುಡಿದರು. ಮತ್ತು ಶ್ರೀಮಠಕ್ಕೆ ತಮ್ಮ ವೈಯಕ್ತಿಕ ಭಕ್ತಿ ಕಾಣಿಕೆಯನ್ನು ಸಲ್ಲಿಸಿದರು. ರಾಜ್ಯಪಾಲರು ಇಂಗ್ಲಿಷಿನಲ್ಲಿ ಮಾತನಾಡಿದುದನ್ನು ರಾಜ್ಯದ ಕನ್ನಡ ಮತ್ತು ಸಂಸ್ಕೃತಿ ಸಚಿವೆ ಶ್ರೀಮತಿ ರಾಣಿ ಸತೀಶ್ ಅವರು ಕನ್ನಡಕ್ಕೆ ಭಾಷಾಂತರಿಸಿದರು.

### *ಹೆಣ್ಣು ಮಕ್ಕಳ ವಿದ್ಯಾರ್ಥಿ ನಿಲಯದ ಉದ್ಘಾಟನೆ :*

ಕರ್ನಾಟಕ ಸರ್ಕಾರದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವರಾದ ಶ್ರೀಮತಿ ಮೋಟಮ್ಮನವರು ಹೆಣ್ಣು ಮಕ್ಕಳ ವಿದ್ಯಾರ್ಥಿ ನಿಲಯದ ಕಟ್ಟಡವನ್ನು ಉದ್ಘಾಟಿಸಿ ಮಾತನಾಡುತ್ತ ಶ್ರೀಮಠದ ಸೇವೆಯನ್ನು ಮುಕ್ತಕಂಠದಿಂದ ಪ್ರಶಂಸಿದರು. ಕಾನೂನು ಮತ್ತು ಸಂಸದೀಯ ವ್ಯವಹಾರ ಸಚಿವರಾದ ಶ್ರೀ ಡಿ.ಬಿ. ಚಂದ್ರೇಗೌಡರು ಪ್ರೌಢಶಾಲಾ ಕಟ್ಟಡದ ಉದ್ಘಾಟನೆ ಮಾಡಿ ''ಭಯೋತ್ಪಾದನೆಯೇ ಎಲ್ಲೆಲ್ಲಿಯೂ ತಾಂಡವ ವಾಡುತ್ತಿರುವಾಗ ಸಿದ್ಧಗಂಗಾಮಠ ಮಾನವೀಯ ಸಾಮರಸ್ಯದ ಸಂದೇಶವನ್ನು ಆಚರಿಸಿ ತೋರಿಸುತ್ತ ಬಂದಿದ್ದು, ಪರಮ ಪೂಜ್ಯ ಶ್ರೀಗಳವರು 'ರಾಷ್ಟ್ರರತ್ನ' ವಾಗಿದ್ದಾರೆ ಎಂದು ಭಕ್ತಿ ನುಡಿಗಳನ್ನಾಡಿದರು. ಸಮಾರಂಭದ ಅಧ್ಯಕ್ಷತೆಯನ್ನು ಜಿಲ್ಲೆಯ ಉಸ್ತುವಾರಿ ಸಚಿವರಾದ ಮಾನ್ಯ ಶ್ರೀ ಟಿ.ಬಿ. ಜಯಚಂದ್ರ ಅವರು ವಹಿಸಿದ್ದರು. ಪೂಜ್ಯ ಶ್ರೀಗಳವರ ನಿಷ್ಕಾಮ ಸೇವೆಗೆ ನಾವೆಲ್ಲ ಕೃತಜ್ಞರಾಗಿರಬೇಕೆಂದು ನುಡಿದರು. ಸಮಾರಂಭದಲ್ಲಿ







ರಾಜ್ಯಪಾಲರಿಂದ ಭಾಷಣ



ಅಂಧ ಮಕ್ಕಳು ತಯಾರಿಸಿದ ವಸ್ತುಗಳನ್ನು ಕುತೂಹಲದಿಂದ ವೀಕ್ಷಿಸುತ್ತಿರುವ ಸನ್ಮಾನ್ಯ ರಾಜ್ಯಪಾಲರು

ಸಂಸದರಾದ ಶ್ರೀ ಜಿ.ಎಸ್. ಬಸವರಾಜು, ಶ್ರೀ ಆರ್.ಎಲ್. ಜಾಲಪ್ಪ, ಶ್ರೀ ಜಿ. ಪುಟ್ಟಸ್ವಾಮಿಗೌಡ ಅವರು ಕೃತಜ್ಞತೆಯ ನುಡಿಗಳನ್ನು ಅರ್ಪಿಸಿದರು.

ಸಮಾರಂಭದಲ್ಲಿ ಬೆಂಗಳೂರಿನ ಶ್ರೀ ಯಜಮಾನ್ ಶ್ರೀಕಂಠಪ್ಪನವರನ್ನು ಮತ್ತು ವಿ. ವೆಂಕಟಾಪುರದ ಶ್ರೀ ತಿಮ್ಮಪ್ಪ ನವರನ್ನು ಸನ್ಮಾನಿಸಲಾಯಿತು.

ಪರಮಪೂಜ್ಯ ಶ್ರೀ ಶ್ರೀಗಳವರು ಆಶೀರ್ವಚನ ನೀಡುತ್ತ ಜಗತ್ತಿನಲ್ಲಿ ಇಂದು ತಲೆದೋರಿರುವ ಭಯಾನಕ ಘಟನೆಗಳಿಗೆ ಸಮಸ್ತರೂ ಜವಾಬ್ದಾರರಾಗಿದ್ದಾರೆ. ಧರ್ಮ ಗುರುಗಳೂ ಕಾರಣರಾಗಿದ್ದಾರೆ. ಧರ್ಮದ ಅಂತರಾರ್ಥವನ್ನು ಅರಿತು ಎಲ್ಲರೂ ಮಾನವ ಕಲ್ಯಾಣಕ್ಕೆ ಶ್ರಮಿಸಬೇಕಾಗಿದೆ ಎಂದರು.

ಸಮಾರಂಭದ ಮೊದಲಲ್ಲಿ ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆಯ ಕಾರ್ಯದರ್ಶಿ ಗಳಾದ ಶ್ರೀ ಟಿ.ಕೆ. ನಂಜುಂಡಪ್ಪ ನವರು ಸ್ವಾಗತಿಸಿದರು. ಶ್ರೀ ಉಮಾಮಹೇಶ್ ಅವರು ವಂದನೆ ಸಲ್ಲಿಸಿದರು. ಶ್ರೀ ಹೆಚ್.ವಿ. ವೀರಭದ್ರಯ್ಯನವರು ಕಾರ್ಯಕ್ರಮ ನಿರೂಪಿಸಿದರು.

### *ಶಿಕ್ಷಕರ ಸಮ್ಮೇಳನ*

ದಿನಾಂಕ ೮-೪-೨೦೦೨ ರಂದು ಸಮಾರಂಭದ ಅಂಗವಾಗಿ ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆಯ ಆಶ್ರಯದಲ್ಲಿ ಸೇವೆ ಸಲ್ಲಿಸುತ್ತಿರುವ ಶಿಕ್ಷಕರ ಸಮ್ಮೇಳನವನ್ನು ಸಮಾವೇಶ ಗೊಳಿಸಲಾಗಿತ್ತು. ಡಾ॥ ಜಿ.ಪಿ. ಬಸವರಾಜು, ಡಾ॥ ರೇಣುಕಾರಾಧ್ಯ ಪ್ರಬಂಧ ಮಂಡಿಸಿದರು. ಸಮ್ಮೇಳನದ ಅಧ್ಯಕ್ಷತೆಯನ್ನು ಶ್ರೀ . ಜಿ.ಎಲ್. ಹೆಗಡೆ ವಹಿಸಿದ್ದರು. ಪರಮಪೂಜ್ಯ ಶ್ರೀ ಶ್ರೀಗಳವರು ಸಾನ್ನಿಧ್ಯ ವಹಿಸಿದ್ದರು. ಪೂಜ್ಯರು ಆಶೀರ್ವಚನ ನೀಡುತ್ತ ಶಿಕ್ಷಕರು ನೀತಿವಂತ ರಾಗಿರುವುದು ಮುಖ್ಯ, ಬೋಧನೆಯ ವಿಷಯದ ಮೇಲೆ ಪ್ರಭುತ್ವವಿಟ್ಟು ಕೊಂಡಿರಬೇಕು, ಅಭಿಮಾನವಿರಬೇಕು ವೃತ್ತಿಯ ಬಗ್ಗೆ ಎಂದು ನುಡಿದರು. ಹೆಚ್.ಬಿ. ನಂಜುಂಡಯ್ಯ ಅವರು ಸ್ವಾಗತಿಸಿದರು. ಶ್ರೀ ಟಿ.ಕೆ. ನಂಜುಂಡಪ್ಪನವರು ಪ್ರಸ್ತಾವಿಕ ಭಾಷಣ ಮಾಡಿದರು. ಶ್ರೀ ರಾಮಚಂದ್ರರಾವ್ ಅವರು ವಂದನೆ ಸಲ್ಲಿಸಿದರು. ಶ್ರೀ ಟಿ.ಎಸ್. ನಾಗರಾಜು ಅವರು ಕಾರ್ಯಕ್ರಮವನ್ನು ನಿರೂಪಿಸಿದರು.

☆



# ಭಕ್ತಿ ಸಮರ್ಪಣೆ

ಶ್ರೀ ಸಿದ್ಧಲಿಂಗಸ್ವಾಮಿಗಳು
ಕಿರಿಯ ಶ್ರೀಗಳು
ಸಿದ್ಧಗಂಗಾ ಮಠ

ಪರಮ ಪೂಜ್ಯರ ೯೪ ಸಂವತ್ಸರಗಳನ್ನು ಈ ನಾಡಿಗಾಗಿ; ಸಮಾಜಕ್ಕಾಗಿ ಸಮರ್ಪಿಸಿ ೯೫ನೇ ಸಂವತ್ಸರಕ್ಕೆ ಪಾದಾರ್ಪಣೆ ಮಾಡಿರುವುದು ಸಂತಸದ ವಿಚಾರವಾದರೂ ಕೂಡ ಈ ಸಂದರ್ಭದಲ್ಲಿ ನಮ್ಮ ಆತ್ಮಾವಲೋಕನವನ್ನು ಮಾಡಿಕೊಳ್ಳಬೇಕಾದ ಸಂದರ್ಭವೂ ಆಗಿದೆ. ಪೂಜ್ಯರಿಂದ ಒಂದು ವರ್ಷದಲ್ಲಿ ಪಡೆದಿದ್ದೇನು ? ಸಲ್ಲಿಸಿದ ಸೇವೆ ಎಷ್ಟು ? ಅವರಿಗೆ ಸಂತೋಷಪಡಿಸಿದ ಕ್ಷಣಗಳೆಷ್ಟು ? ಅವರಿಗೆ ಸಮಾಧಾನವಾಗುವ ರೀತಿಯಲ್ಲಿ ನಡೆದದ್ದು ಎಷ್ಟು ? ಎನ್ನುವ ಪ್ರಶ್ನೆಗಳೊಂದಿಗೆ ನೋಡಿಕೊಂಡಾಗ ಅದಕ್ಕೆ ಉತ್ತರ ಇಲ್ಲವೇ ಇಲ್ಲವೆಂದು ಅನಿಸುತ್ತಿದೆ. ಆದ್ದರಿಂದ ಈ ಶುಭ ಸಂದರ್ಭದಲ್ಲಿ ಮೇಲಿನ ವಿಚಾರಗಳತ್ತ ಸಂಪೂರ್ಣ ಸಮರ್ಪಿಸಿಕೊಳ್ಳುವ ದೃಢಮನಸ್ಸಿನೊಂದಿಗೆ ಸಂಕಲ್ಪ ತೊಡುವ ಒಂದು ದಿನವಿದೆಂದೆ ಭಾವಿಸುತ್ತೇವೆ.

ಪರಮಪೂಜ್ಯರ ೯೫ನೇ ಹುಟ್ಟುಹಬ್ಬವನ್ನು ಗುರುವಂದನ ಸಮಾರಂಭವಾಗಿ ಆಚರಿಸುತ್ತಿದ್ದೇವೆ. ಇದು ಪರಮ ಪೂಜ್ಯರಿಗೆ ಇಷ್ಟವಿಲ್ಲದ ಬೇಸರದ ಸಂಗತಿ. ಪೂಜ್ಯರನ್ನು ಈ ಕಾರ್ಯಕ್ರಮಕ್ಕೆ ಅನುಮತಿಯನ್ನು ಕೋರಿದಾಗ ಸಾರಾಸಗಟಾಗಿ ನಿರಾಕರಿಸಿದರೂ ಕೂಡ ನಮ್ಮೆಲ್ಲರ ಒತ್ತಾಯ, ಬಲವಂತ, ಅಪೇಕ್ಷೆ ಜಾಸ್ತಿಯಾದಾಗ, ಅಕ್ಕ ಆ ಭಗವಂತನನ್ನು ಕುರಿತು ಹೇಳುವಂತೆ "ನೀ ಕೇಳಿದೊಡೆ ಕೇಳು, ಕೇಳದಿದ್ದಡೆ ಮಾಣು, ನಾನಿನ್ನ ಹಾಡಿದಲ್ಲದೆ ಸೈರಿಸಲಾರೆನು" ಎನ್ನುವಂತೆ ನಮ್ಮೆಲ್ಲರ ಸ್ಥಿತಿಯಾದಾಗ ಅನಿವಾರ್ಯವಾಗಿ ಪೂಜ್ಯರು ಅನುಮತಿಯಿತ್ತರು. ಅದೂ ಯಾವ ರೀತಿ ? ಈ ಕಾರ್ಯಕ್ರಮ ಕೇವಲ ಗುರುವಂದನ ಕಾರ್ಯ ಮಾತ್ರವಾಗಿರದೆ ಸಮಾಜದ ವಿವಿಧ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದ ಗಣ್ಯ ವ್ಯಕ್ತಿಗಳಿಗೆ ಗೌರವ ಸಮರ್ಪಿಸುವ ಮುಖಾಂತರ ಆಚರಣೆಗೆ ಅನುಮತಿಯಿತ್ತದ್ದು ನಮ್ಮೆಲ್ಲರ ಪುಣ್ಯವೆನ್ನದೆ ಮತ್ತಿನ್ನೇನು ?

ಪರಮ ಪೂಜ್ಯರು ಶ್ರೀಮಠದ ಪೂರ್ಣ ಜವಾಬ್ದಾರಿಯನ್ನು ತಮ್ಮ ಹೆಗಲ ಮೇಲೆ ಹೊತ್ತಾಗ ಇದ್ದದ್ದು ಬರಿಗೈ, ಏನೇನು ಇಲ್ಲದ ಸ್ಥಿತಿ. ಕನಿಷ್ಠ ಬೆರಳೆಣಿಕೆಯ ನೂರು ವಿದ್ಯಾರ್ಥಿಗಳ ಪೋಷಣೆಗೆ, ಬರುವ ಭಕ್ತಾದಿಗಳ ಸೇವೆಗೆ ಬಹಳ ಕಷ್ಟ ಪಟ್ಟು ವ್ಯವಸ್ಥೆಗೊಳಿಸಿ ರೈತರ, ಹಳ್ಳಿಗರ ಸಹಕಾರ ಸಹಾಯದಿಂದ ಹಂತ ಹಂತವಾಗಿ ಇಷ್ಟೆಲ್ಲ ಸೇವೆಯನ್ನು ಪೂಜ್ಯರು ಸಲ್ಲಿಸುತ್ತಿದ್ದಾರೆ. ಆಗಿನ ಕಷ್ಟದ ದಿನಗಳನ್ನು ಕೇಳಿದರೆ ಭಯ ಉಂಟಾಗುತ್ತದೆ. ಬಸವಣ್ಣನವರು ಹೇಳಿದ *"ಮುನ್ನಿನವರು ಹೋದ ದಾರಿ ಭಯ ಕಾಣಿರಣ್ಣ"* ಎಂಬುದು ಸ್ಮರಣೆಗೆ ಬರುತ್ತದೆ. ನಿಜಗುಣರು ತಿಳಿಸಿರುವಂತೆ *"ಎಡರಡಸಿದ ವೇಳೆಯೊಳು ಧೈರ್ಯವನು ಸಿರಿವಡೆದುಜೀವಿಸುವೆಡೆಯೊಳು, ವಿನಯನು ಕಡು ಜಪ್ಪನದೊಳು ವಿಕೃತಿದೋರದಿಹುದನು ಹಿಡಿದ ನೇಮವ ನೆಡೆವಿಡದತಿ ಫಲವನು"* ಎನ್ನುವುದನ್ನು ಸಂಪೂರ್ಣ ಆಚರಣೆಯಲ್ಲಿಟ್ಟುಕೊಂಡು ಬಸವಣ್ಣನವರು ಹೇಳುವಂತೆ **"ಛಲವಿಲ್ಲದವರ ಮೆಚ್ಚ ನಮ್ಮ ಕೂಡಲ ಸಂಗಮದೇವಾ"** ಎನ್ನುವ ಛಲದೊಂದಿಗೆ ಇಷ್ಟೆಲ್ಲಾ ಸೇವಾ ಕೈಂಕರ್ಯಗಳನ್ನು ವಿಸ್ತರಿಸಿದ್ದಾರೆ.

ಪೂಜ್ಯರ ಸೇವೆ ಈ ನಾಡಿಗೆ ಸಮಾಜಕ್ಕೆ ನಾನಾ ವಿಧದಲ್ಲಿ ನಡೆಯುತ್ತಿದ್ದರೂ ಕೂಡ ವಿದ್ಯಾರ್ಥಿಗಳಿಗೆ ಸಲ್ಲಿಸುತ್ತಿರುವ ಸೇವೆ ಅವರ್ಣನೀಯ. ಅದು ಅವರಿಗೆ ಪರಮ ಆನಂದಮಯ.

ಭಾರತೀಯ ಆರ್ಯೋಕ್ತಿಗಳಾದ ಮಾತೃದೇವೋಭವ, ಪಿತೃದೇವೋಭವ, ಆಚಾರ್ಯದೇವೋಭವ, ಅತಿಥಿ ದೇವೋಭವ ಎನ್ನುವುದನ್ನು ಮೀರಿ *"ವಿದ್ಯಾರ್ಥಿ ದೇವೋಭವ"* ಎನ್ನುವ ಸತ್ಯವನ್ನು ಕಂಡು ಅದನ್ನು ಮಂತ್ರದಂತೆ ಪಠಿಸಿ ನಿಜಾಚಾರಣೆಯಲ್ಲಿ ತಂದಿದ್ದಾರೆ. ಮಕ್ಕಳು ಮಹಾದೇವನ ಪ್ರತಿರೂಪವೆಂದು ಭಾವಿಸಿ ಇವನಾರವ ಇವನಾರವ ಇವನಾರವ ನೆಂದನಿಸದೆ ಇವನಮ್ಮವ ಇವನಮ್ಮವ ಇವನಮ್ಮವ ನೆಂದೆನಿಸುವ ರೀತಿಯಲ್ಲಿ ಎಲ್ಲ ಮಕ್ಕಳನ್ನು ಸಮದೃಷ್ಟಿಯಿಂದ ಕಾಣುವ ಉದಾರಚರಿತರಾಗಿದ್ದಾರೆ.

ಬಸವಣ್ಣನವರು ಹೇಳುವಂತೆ ತಂದೆ ನೀನು ತಾಯಿ ನೀನು, ಬಂಧು ನೀನು ಬಳಗ ನೀನು ಎನ್ನುವಂತೆ ವಿದ್ಯಾರ್ಥಿಗಳಿಗೆ ತಂದೆಯಂತೆ, ತಾಯಿಯಂತೆ, ಬಂಧುವಾಗಿ ಸೇವೆ ಗೈಯ್ಯುತ್ತಲಿದ್ದಾರೆ. ಈ ಸೇವೆ ೧೯೩೦ ರಿಂದ ನಿರಂತರವಾಗಿ ನಡೆದು ಬಂದಿದೆ. ಇಂತಹ ಸೇವೆಯಿಂದ ಒಂದು ದಿನವೂ ಬೇಸರ, ಬೇಜಾರು ಅನ್ನುವ ಕ್ಷಣವಿಲ್ಲ. ಎಷ್ಟೇ ಆಯಾಸವಾದರೂ ಕೂಡ ಮಕ್ಕಳ ನಲಿದಾಡುವಿಕೆ, ಓಡಾಡುವಿಕೆ, ಊಟ ಮಾಡುವಿಕೆ, ಶಾಲೆಗೆ ಹೋಗುವುದು, ಪ್ರಾರ್ಥನೆಯಲ್ಲಿ ವಿದ್ಯಾರ್ಥಿಗಳನ್ನು ನೋಡಿದಾಗ ಪೂಜ್ಯರಲ್ಲಿ ಆನಂದ ಸಂತೋಷ ಇಮ್ಮಡಿಸಿ ಬರುತ್ತದೆ. ಇಂತಹ ಸೇವೆಗಾಗಿ ಪೂಜ್ಯರು ಬಸವಣ್ಣನವರು ಹೇಳುವಂತೆ

*ನಾನು ಆರಂಭವ ಮಾಡುವೆನಯ್ಯ ಗುರು ಪೂಜೆಗೆಂದು*
*ನಾನು ಬೆವಹಾರವ ಮಾಡುವೆನಯ್ಯ ಲಿಂಗಾರ್ಚನೆಗೆಂದು*
*ನಾನು ಪರಸೇವೆಯ ಮಾಡುವೆನೆಯ್ಯ ಜಂಗಮ ದಾಸೋಹಕ್ಕೆಂದು ಎನ್ನುವುದನ್ನು*
*ನಾನು ಆರಂಭ ಮಾಡುವೆನಯ್ಯ ವಿದ್ಯಾರ್ಥಿಗಳ ಪೋಷಣೆಗೆಂದು*
*ನಾನು ಬೆವಹಾರವ ಮಾಡುವೆನಯ್ಯ ವಿದ್ಯಾರ್ಥಿಗಳ ಕಲ್ಯಾಣಕ್ಕೆಂದು*
*ನಾನು ಪರಸೇವೆಯ ಮಾಡುವೆನಯ್ಯ ವಿದ್ಯಾರ್ಥಿಗಳ ವಿದ್ಯಾರ್ಜನೆಗೆಂದು*

ಎನ್ನುವಂತೆ ತಮ್ಮ ದಿನನಿತ್ಯದ ಕಾಯಕ, ಲಿಂಗಪೂಜೆ, ದಾಸೋಹಗಳನ್ನು ವಿದ್ಯಾರ್ಥಿಗಳಿಗೆ ಹಾಗೂ ಸಮಾಜಕ್ಕೆ ನಮ್ಮ ಪೂಜ್ಯ ಗುರುಗಳು ಮೀಸಲಾಗಿರಿಸಿರುವರು.

ಪೂಜ್ಯರ ಸಮಾಜ ಚಿಂತನೆ, ಅದ್ಭುತವಾದದ್ದು. ಇಂದಿನ ನಮ್ಮ ಅಶಾಂತಿ, ಗೊಂದಲ, ರಕ್ತಪಾತಗಳಿಗೆ ಕಾರಣ, ಮಾನವ ಪ್ರಜ್ಞೆಯು ದೂರ ಸರಿದು ದಾನವ ಪ್ರವೃತ್ತಿ ಎಲ್ಲಡೆಯಲ್ಲಿಯೂ ಕಾಣುತ್ತದೆ ಇಂತಹ ಅಮಂಗಳ ವಾತಾವರಣ ನಿವಾರಣೆ ಯಾಗಬೇಕಾದರೆ ಎಲ್ಲರಲ್ಲಿ ಮಾನವ ಪ್ರಜ್ಞೆ ಜಾಗೃತವಾಗಬೇಕೆಂದು ಪೂಜ್ಯರು ಒತ್ತಿ ಒತ್ತಿ ಹೇಳುತ್ತಿದ್ದಾರೆ. ಹಾಗೆಯೇ ರಾಷ್ಟ್ರ ಚಿಂತನೆಯೂ ಕೂಡ, ಯಾವುದೇ ಕ್ಷೇತ್ರ ಚೆನ್ನಾಗಿ ಮುಂದುವರೆಯಬೇಕಾದರೆ ಮುಖಂಡರಲ್ಲಿ ಸತ್ಯ, ಸೇವೆ, ಪ್ರಾಮಾಣಿಕತೆ, ತ್ಯಾಗ, ಪರಿಶ್ರಮ, ನಿಷ್ಠೆ ಈ ಗುಣಗಳಿಂದ ಕೂಡಿದಾಗ ಮಾತ್ರ ರಾಷ್ಟ್ರ ಉತ್ತಮ ಭವಿಷ್ಯವನ್ನು ಕಾಣಲು ಸಾಧ್ಯ ಎಂದು ಪೂಜ್ಯರು ಪದೇ ಪದೇ ತಮ್ಮ ಆಶೀರ್ವಚನದಲ್ಲಿ ಪ್ರಸ್ತಾಪಿಸುತ್ತಲೇ ಇದ್ದಾರೆ. ಪರಮ ಪೂಜ್ಯರ ಮಧ್ಯದಲ್ಲಿದ್ದು ಅವರನ್ನು ನೋಡುವುದೇ, ಅವರ ಮಾತು ಕೇಳುವುದೇ ನಮ್ಮೆಲ್ಲರ ಭಾಗ್ಯ. ಈ ಭಾಗ್ಯ ನಮ್ಮೆಲ್ಲರಿಗೆ ಸದಾ ಇರುವಂತೆ ಕರುಣಿಸಲೆಂದು ಗುರುಗಳನ್ನು ಪ್ರಾರ್ಥಿಸಿ ನನ್ನ ಈ ನುಡಿ ಪುಷ್ಪಗಳನ್ನು ಪೂಜ್ಯರ ಶ್ರೀ ಚರಣಗಳಲ್ಲಿ ಅರ್ಪಿಸುತ್ತಾ ವಿರಮಿಸುತ್ತೇವೆ.

*ಧರ್ಮಪೀಠಗಳ ಕರ್ತವ್ಯ ಕಲುಷಿತವಾದ ಇವೊತ್ತಿನ ಯುಗದಲ್ಲಿ ಅದಕ್ಕೊಂದು ಪೂರಕವಾದ ಕಾರ್ಯ ಧರ್ಮಪೀಠಗಳಿಂದ ನೈತಿಕ ಕ್ರಾಂತಿಯ ಕಾರ್ಯದಲ್ಲಿ ಧರ್ಮಪೀಠಗಳ ಸ್ಥಾನ, ಪಾತ್ರ, ಅತ್ಯಂತ ಮಹತ್ತರವಾದುದು. ಆ ಕಾರ್ಯದಲ್ಲಿ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಅಂತಹ ಧಾರ್ಮಿಕ ನೆಲೆಯಲ್ಲಿ ಇಡೀ ಸಮಾಜದಲ್ಲಿಯೇ ಒಂದು ದೊಡ್ಡ ಶೈಕ್ಷಣಿಕ ಸೇವೆ ನಡೆಸಿ ಎಲ್ಲಾ ಮಠಾಧಿಪತಿಗಳಿಗೆ ಆದರ್ಶ ಪೀಠಾಧಿಪತಿಗಳಾಗಿ, ದೇಶದಲ್ಲಿರುವ ಎಲ್ಲಾ ಪ್ರಜ್ವಲ ಪೀಠಾಧಿಪತಿಗಳಿಗೂ ಕೂಡ ಹಿರಿಯರಾಗಿ, ಮಾರ್ಗದರ್ಶಕರಾಗಿ ದೇಶಕ್ಕೆ ಉತ್ತಮ ರೀತಿಯಲ್ಲಿ ಮಾರ್ಗದರ್ಶನ ನೀಡುತ್ತಿದ್ದಾರೆ.*

*- ಶ್ರೀ ಶ್ರೀ ವಿಶ್ವೇಶ್ವರತೀರ್ಥ ಶ್ರೀಪಾದಂಗಳವರು*
*ಶ್ರೀ ಪೇಜಾವರ ಮಠ, ಉಡುಪಿ*

# ಪರಮಪೂಜ್ಯ ಶ್ರೀ ಶ್ರೀಗಳವರು
# ಗುರುವಂದನಾ ಸಮಾರಂಭದಲ್ಲಿ ನೀಡಿದ ಆಶೀರ್ವಚನ



ಸಮಾರಂಭದ ಸಾನ್ನಿಧ್ಯ ಮತ್ತು ಅಧ್ಯಕ್ಷತೆಯನ್ನು ವಹಿಸಿರುವ ಮಹಾಸ್ವಾಮಿಗಳಿರ್ವರಿಗೆ ನಮಸ್ಕರಿಸಿ ಹರಗುರು ಚರಮೂರ್ತಿಗಳನ್ನು ನೆನೆದು ಸಮಾರಂಭವನ್ನು ಉದ್ಘಾಟಿಸಿದ ಭಾರತ ಸರ್ಕಾರದ ರಕ್ಷಣಾ ಸಚಿವರಾದ ಮಾನ್ಯಶ್ರೀ ಜಾರ್ಜ್ ಫರ್ನಾಂಡಿಸ್ ಅವರೆ, ರಾಜ್ಯದ ಮುಖ್ಯ ಮಂತ್ರಿಗಳಾದ ಮಾನ್ಯ ಶ್ರೀ ಎಸ್.ಎಂ. ಕೃಷ್ಣ ಅವರೆ, ಉಪಸ್ಥಿತರಿರುವ ಎಲ್ಲ ಸಚಿವರೆ, ಶಾಸಕರೆ, ಗಣ್ಯ ಮಾನ್ಯರೆ, ಸನ್ಮಾನಿತ ವಿಶಿಷ್ಟರೆ, ಸುದ್ದಿಮಾಧ್ಯಮದವರೆ, ಶ್ರೀಮಠದ ಅಭಿಮಾನಿಗಳೆ, ಆತ್ಮೀಯರೆ, ತಾಯಂದಿರೆ - ಕಾರ್ಯಕ್ರಮಕ್ಕೆ ನಿಮ್ಮೆಲ್ಲರಿಂದ ಶೋಭೆ ಬಂದಿದೆ, ಸಂತೋಷ ಉಂಟಾಗಿದೆ.

ನಾವೀಗ ೯೫ ರ ಹೊಸ್ತಲಿಗೆ ಬಂದಿದ್ದೇವೆ. ಶಿವನ ಕರುಣೆ, ಗುರುಕೃಪೆ ಇಲ್ಲಿಯವರೆಗೆ ಕರೆತಂದಿದೆ. ಶ್ರೀಮಠದ ಮೂಲಕ ಕಿಂಚಿತ್ ಜನಸೇವೆಯನ್ನು ಮಾಡುವ ಭಾಗ್ಯವನ್ನು ತಂದು ಕೊಟ್ಟಿದೆ. ನಮ್ಮನ್ನು ನಿಮ್ಮ ಪ್ರೀತಿ ಶ್ರದ್ಧೆಗಳು, ಭಕ್ತಿ-ಪ್ರೇಮಗಳು, ಮೈ-ಮನಗಳ ಆರೋಗ್ಯವನ್ನು ಕಾಪಾಡಿಕೊಂಡು ಬಂದಿವೆ. ಗುರು ರಕ್ಷೆ ಸದಾ ಎಚ್ಚರವಾಗಿದ್ದು, ಕೈಹಿಡಿದು ಕರುಣಾಳು ಬೆಳಕಾಗಿ ನಡೆಸಿದೆ ಎಂಬುದನ್ನು ವ್ಯಕ್ತಪಡಿಸಲು ನಮಗೆ ಸಂತೋಷವಾಗುತ್ತಿದೆ. ಜನ್ಮ ದಿನಾಚರಣೆ, ಗುರುವಂದನ ಇಂಥವುಗಳಲ್ಲಿ ನಮಗೆ ಆಸಕ್ತಿಯಿಲ್ಲ ಎಂದರೆ ಔಪಚಾರಿಕ ಮಾತುಗಳೆಂದು ನೀವು ತಿಳಿಯುವುದಿಲ್ಲವೆಂಬುದನ್ನು ಬಲ್ಲವರಾಗಿದ್ದೇವೆ ''ಗೆಲುವೆನೆಂಬ ಭಾಷೆ ಭಕ್ತನದು'' ಎಂಬ ಅಣ್ಣ ಬಸವಣ್ಣನವರ ಮಾತಿನಂತೆ ನಿಮ್ಮೆಲ್ಲರ ಪ್ರೀತಿಗೆ ನಾವು ಒಪ್ಪಬೇಕಾಯಿತು. ಈ ಸಂದರ್ಭದಲ್ಲಿ ಸಮಾಜದ ಅಭಿವೃದ್ಧಿಗಾಗಿ ಶ್ರಮಿಸಿದ ಪುಣ್ಯಾತ್ಮರನ್ನು ಸನ್ಮಾನಿಸುವ ಸತ್ಕಾರ್ಯಕ್ಕಾಗಿ ಅನುಮೋದಿಸ ಬೇಕಾಯಿತು.

ಜಗತ್ತಿನ ಇತಿಹಾಸದಲ್ಲಿ ಇಪ್ಪತ್ತನೆಯ ಶತಮಾನವು ಅತ್ಯಂತ ಮಹತ್ವವಾದ ವೈಶಿಷ್ಟ್ಯಪೂರ್ಣವಾದ ಅವಧಿಯೆಂದು ಭಾವಿಸಬೇಕಾಗಿದೆ. ಈಚಿನ ಸುಮಾರು ಐವತ್ತು ವರ್ಷಗಳಲ್ಲಿ ಆಗಿರತಕ್ಕ ಬದಲಾವಣೆಗಳು ಕಲ್ಪನಾತೀತವಾಗಿದೆ. ವಿಜ್ಞಾನವು ಮಾನವನಿಗೆ ಅದ್ಭುತವಾದ ಶಕ್ತಿಯನ್ನು ಕೊಟ್ಟಿರುತ್ತದೆ. ಅದರ ಪ್ರಭಾವದಿಂದ ವಿಸ್ಮಯಕಾರಿಯಾದ ಸಂಶೋಧನೆಗಳು ಪ್ರಪಂಚವನ್ನೇ ದಂಗುಬಡಿಸುವಂತಹ ಘಟನೆಗಳು ನಡೆಯುತ್ತಿವೆ. ಮನುಷ್ಯ ಸರ್ವ ಸಮರ್ಥ. ಅಸಾಧ್ಯವಾದುದು ಯಾವುದೂ ಇಲ್ಲವೆನ್ನುವ ಘೋಷಣೆಯು ಸರ್ವತ್ರ ಕೇಳಿ ಬರುತ್ತಾ ಇದೆ. ಜಗತ್ತು ಸಂಕುಚಿತವಾಗಿದೆ. ಪ್ರತ್ಯೇಕತೆಯು ಅಳಿಸಿ ಹೋಗಿರುತ್ತದೆ. ಯಾವುದೇ ರಾಷ್ಟ್ರವಾಗಲಿ ಎಲ್ಲರೊಳಗೊಂದಾಗಿ ಬಾಳ್ವಿಕೆ ಮಾಡುವುದರ ಔಚಿತ್ಯವು ಗಣನೀಯವಾಗಿದೆ. ಮಾನವ ಜೀವನಕ್ಕೆ ಅತ್ಯವಶ್ಯಕವಾದ ಜೀವನ ಸೌಕರ್ಯಗಳು ಅತ್ಯಂತ ತೃಪ್ತಿಕರವಾದ ರೀತಿಯಲ್ಲಿ ಲಭ್ಯವಾಗುತ್ತಾ ಇವೆ. ಈ ಬಯಕೆಗಳ ಪೂರೈಕೆಗಾಗಿ ಹಲವಾರು ಸಂಸ್ಥೆಗಳು ಉದಯವಾಗಿ ಕಾರ್ಯ ಮಾಡುತ್ತಾ ಇವೆ. ಲಭ್ಯವಾಗಿರತಕ್ಕ ಸೌಕರ್ಯಗಳಿಂದ ತೃಪ್ತಿ ಹೊಂದದ ಮಾನವ ಇನ್ನು ಹೆಚ್ಚಿನ ಸೌಲಭ್ಯವನ್ನು ದೊರಕಿಸುವ ಸಲುವಾಗಿ ಪ್ರಯತ್ನಶೀಲನಾಗಿದ್ದಾನೆ. ಈ ವಿಧವಾದ ಆಸೆ ಆಕಾಂಕ್ಷೆಗಳ ಬೆಳವಣಿಗೆಯಿಂದ ಉಂಟಾಗಿರತಕ್ಕ ಪರಿಸ್ಥಿತಿಯನ್ನು ಗಂಭೀರವಾಗಿ ಚಿಂತಿಸಬೇಕಾಗಿದೆ. ಮಾನವ ಜೀವನಕ್ಕೆ ಅತ್ಯವಶ್ಯಕವಾದ ಸೌಲಭ್ಯಗಳು ಸಕಲ ಮಾನವರಿಗೂ ಸಮರ್ಪಕವಾಗಿ ಪೂರೈಕೆಯಾಗಬೇಕಾಗಿದೆ. ಇಂದಿನ ಸಮಾಜಿಕ ಚಿತ್ರವನ್ನು ಪರಿಶೀಲಿಸಿದಾಗ ಒಂದು ಕಡೆ ಕೋಟ್ಯಾಂತರ ಜನರಿಗೆ ಅತ್ಯವಶ್ಯಕವಾದ





ಸೌಕರ್ಯಗಳು ಇಲ್ಲದೆ ಬಡತನದ ಬವಣೆಯಲ್ಲಿ ನಿಷ್ಕೃಷ್ಟವಾದ ಜೀವನ ದರ್ಶನ ಗೋಚರವಾಗುತ್ತಾ ಇದೆ. ಮತ್ತೊಂದು ಕಡೆ ಸಂಪತ್ತಿನ ಸಂಗ್ರಹ ಅಟ್ಟಹಾಸ ಆಡಂಬರಗಳ ವೈಭವ್ಯದ ದೃಶ್ಯ ಗೋಚರವಾಗುತ್ತ ಇದೆ. ಬಹು ಜನತೆಯ ಅಸಮಾಧಾನಕ್ಕೆ ಕಾರಣವಾಗಿ ಘರ್ಷಣೆಗಳಿಗೆ ಅವಕಾಶ ವಾಗುತ್ತಾ ಇದೆ.

ಕೇವಲ ಲೌಕಿಕ ಸಂಪತ್ತಿನಗಳಿಕೆ ಭೌತಿಕ ಶಕ್ತಿಯ ಪ್ರಯೋಗವೇ ಜೀವನ ಸರ್ವಸ್ವ. ಜೀವನದ ಸಾರ್ಥಕತೆ ಎಂದು ನಂಬಿರುವ ಮಾನವನು ತನ್ನ ಜೀವನದ ಗುರಿಯನ್ನೇ ಮರೆತುಬಿಟ್ಟಿದ್ದಾನೆ. ಜೀವನ ಸ್ವರೂಪ ದರ್ಶನವನ್ನೇ ಅರಿಯುವ ಪ್ರಯತ್ನವನ್ನೇ ಮಾಡುತ್ತಾ ಇಲ್ಲ. ಅಲ್ಪದರ ಅರಿವಿನಿಂದಲೇ ತೃಪ್ತನಾಗಿರತಕ್ಕ ಮಾನವ ಸಂಪೂರ್ಣ ಜೀವನದ ಪರಿಕಲ್ಪನೆಯನ್ನೇ ಮರೆತಿದ್ದಾನೆ. ಜೀವನ ಅಂತರಂಗ-ಬಹಿರಂಗವೆಂದು ದ್ವಿಮುಖವಾಗಿದೆ. ಮನುಷ್ಯ ಸಸ್ಯವರ್ಗಕ್ಕೆ ಸೇರಿದವನಲ್ಲ, ಪ್ರಾಣಿ ವರ್ಗಕ್ಕಿಂತಲೂ ಮೇಲಾಗಿರತಕ್ಕವನು. ಅವನ ಪರಮ ಗುರಿ ಸತ್ಯಾನ್ವೇಷಣೆ. ಈ ಗುರಿ ಸಾರ್ಥಕವಾಗಬೇಕಾದರೆ ಬಾಹ್ಯ ಜೀವನದ ಪ್ರಗತಿಯ ಅವಶ್ಯಕತೆಯಂತೆಯೇ ಅಂತರಂಗ ಜೀವನವು ಅರಳಬೇಕಾಗಿದೆ. ಅಂತೆಯೇ ಧರ್ಮದ ಅವಶ್ಯಕತೆ. ಧರ್ಮವೆಂದರೆ ಯಾವುದೇ ಸಂಕುಚಿತವಾದ ಧರ್ಮವಲ್ಲ ಪರಂತು, ಮಾನವ ಧರ್ಮ ಅರ್ಥಾತ್ ಮಾನವ ಮಾನವನಾಗಿಯೇ ಬಾಳಬೇಕಾದ ಅರಿವು ಮತ್ತು ಆಚರಣೆ, ಎಲ್ಲರಲ್ಲಿಯೂ ಮಾನವ ಪ್ರಜ್ಞೆಯನ್ನು ಉಂಟು ಮಾಡುವುದು ನಿಜವಾದ ಧರ್ಮ. ನಾನು ಮಾನವ ಎನ್ನುವ ಪ್ರಜ್ಞೆ ಸ್ಥಿರವಾದ ಮೇಲೆ ಮಾನವನಾಗಿ ಮಾಡಬೇಕಾದ ಕರ್ತವ್ಯದ ಅರಿವು ಮುಟ್ಟಬೇಕಾದ ಗುರಿಯನ್ನು ಚಿಂತನೆ ಮಾಡುವ ವಿವೇಕ ಜಾಗೃತವಾಗಬೇಕು. ಇಂದು ಭೌತಿಕ ಪ್ರಗತಿಯ ಹಿರಿಮೆಯಿಂದ ಮೋಹಿತನಾಗಿರುವ ಮನುಷ್ಯ ಮಾನವ ಪ್ರಜ್ಞೆಯನ್ನು ಮರೆತು ದಾನವ ಪ್ರಜ್ಞೆಯನ್ನು ಬೆಳೆಸುತ್ತಿರುವುದು ಗೋಚರವಾಗುತ್ತಿದೆ. ಅಂತೆಯೇ ಮಾನವ ಧರ್ಮವನ್ನು ಅರಿತು ಆಚರಿಸಿ ಮಾನವನಾಗಿಯೇ ಬಾಳ್ವಿಕೆ ಮಾಡುವ ಪ್ರಜ್ಞೆಗಾಗಿ ಜೀವನ ಸಾರ್ಥಕತೆಯನ್ನು ಹೊಂದಬೇಕಾಗಿದೆ. ಸಹಜ ಧರ್ಮದ ಅರಿವೆ ಆಚರಣೆಯಿಂದ ಈ ಮಹತ್ತರವಾದ ಕಾರ್ಯವಾಗಬೇಕಾಗಿದೆ. ವಿಶ್ವಶಾಂತಿ ಸ್ಥಾಪಿತವಾಗ ಬೇಕಾಗಿದೆ. ಕೆಲವರು ಧರ್ಮವನ್ನು ಜಾತಿಯೆಂದು ಪರಿಗಣಿಸಿ ಸಮಾಜವನ್ನು ಛಿದ್ರ ಛಿದ್ರವಾಗಿ ಮಾಡುತ್ತಿರುವುದು ಕಾಣಬರುತ್ತಿದೆ. ಜಾತಿ ಕಾದಿ ಮಡಿಸುವುದು, ಧರ್ಮ ಕೂಡಿ ಬದುಕಿಸುವುದು, ಅಂತೆಯೇ ಜಾತಿಯ ಸಂಕುಚಿತ ಕಲ್ಪನೆಯನ್ನು ಕಿತ್ತೊಗೆದು ನಿಜವಾದ ಧರ್ಮವನ್ನು ಸ್ಥಾಪಿಸಬೇಕಾಗಿದೆ.

ಅತಿ ಪ್ರಾಚೀನ ಕಾಲದಿಂದಲೂ ಇದುವರೆಗಿನ ಭಾರತೀಯ ಇತಿಹಾಸದ ಅವಲೋಕನ ಮಾಡಿದಾಗ ಈ ನಮ್ಮ ದೇಶದ ಒಂದು ವಿಶಿಷ್ಟ ಸೂತ್ರವು ನಮಗೆ ಎದ್ದು ಕಾಣುವುದು. ಭಾರತ ಇತಿಹಾಸದ ಘಟನಾ ಕ್ರಮದಲ್ಲಿ - ಪ್ರಾಚೀನ ಕಾಲದಿಂದಲೂ ಜಗತ್ತಿನ ಬೇರೆ ಬೇರೆ ಧರ್ಮಗಳು ಬಂದು ನೆಲೆಸಿವೆ. ಕ್ರಮೇಣವಾಗಿ ಇವೆಲ್ಲವುಗಳಲ್ಲಿ ಸೌಹಾರ್ದತೆ ವಿಕಸಿತವಾಗುತ್ತ ಬಂದಿದೆ. ವೇದ ಕಾಲದ ಋಷಿ ಮುನಿಗಳ **ದೃಷ್ಟಿ, ಏಕಂಸತ್ ವಿಪ್ರಾಃ ಬಹುಧಾವದಂತಿಯಾಗಿದೆ.** ಮೇಲ್ನೋಟಕ್ಕೆ ಕಾಣುವ ಈ ವಿವಿಧತೆಯಲ್ಲಿ ಒಂದು ಸರ್ವಸಮಾನ ಶಾಶ್ವತ ಸತ್ಯವನ್ನು ಕಂಡು ಹಿಡಿಯುವುದು ಅವರ ದೃಷ್ಟಿಯಾಗಿತ್ತು. ಅಂದಿನಿಂದಲೂ ಭಾರತೀಯ ಸಂಸ್ಕೃತಿಯು ಅನೇಕತೆಯಲ್ಲಿ ಏಕತೆಯನ್ನು ಕಾಣುವ ಈ ದೃಷ್ಟಿಯನ್ನು ಪೋಷಿಸುತ್ತಾ ಬಂದಿದೆ.

ಭಾರತಕ್ಕೆ ಒಂದು ಸ್ಪಷ್ಟ ವ್ಯಕ್ತಿತ್ವವಿದೆ. ತನ್ನದೆ ಎನ್ನುವ ಶ್ರೇಷ್ಠವಾದ ಸಂಸ್ಕೃತಿ ಇದೆ. ಸಂಸ್ಕೃತಿ ಎಂಬುದು ಬರಿ ಸಮಾಜದ ಘರ್ಷಣೆಯಿಂದ ಬರುವ ಗುಣವಲ್ಲ, ನಾಗರೀಕ ಚೇಷ್ಟೆಯೂ ಅಲ್ಲ. ಐಶ್ವರ್ಯ, ಅಧಿಕಾರ, ಜಾಣತನ, ಕಲಿತವಿದ್ಯೆ ಇವುಗಳೂ ಅಲ್ಲ. ಇವುಗಳು ಹೇಯವೆಂದಲ್ಲ, ಇವುಗಳಿಂದ ಸಾಮಾಜಿಕ ಬದುಕಿಗೆ ಕಳೆಬರುತ್ತದೆ. ಸೊಬಗು ಮೂಡುತ್ತದೆ. ಆದರೆ ಇವೆಲ್ಲ ಸಂಸ್ಕೃತಿಯಲ್ಲ, **ಸಂಸ್ಕೃತಿಯೆಂಬುದು ಆತ್ಮವ್ಯವಸಾಯದ ಫಲ, ನಾಗರಿಕತೆ ಸಂಸ್ಕೃತಿಯಾಗಬೇಕಾದರೆ ಅದರಲ್ಲಿ ಆಧ್ಯಾತ್ಮಿಕ ಒಳ್ಳೆಯತನ ಸೇರಬೇಕು, ಒಳ್ಳೆಯ ತನವೇ ಸಂಸ್ಕೃತಿಯ ಸಾರ.**

ಭರತ ಖಂಡದಲ್ಲಿ ನೆಲಸಿರುವ ವಿವಿಧ ಧರ್ಮೀಯರಲ್ಲಿ ಶುದ್ಧ ನಿರಭಿಮಾನಿ ಸತ್ಯಗ್ರಾಹಿ ದೃಷ್ಟಿಯು, ಶುದ್ಧ ಆಧ್ಯಾತ್ಮವು ವೃದ್ಧಿಯಾಗಬೇಕು. ಸಕಲ ಧರ್ಮಗಳೂ ತಮ್ಮವೇ ಎಂಬ ಆತ್ಮೀಯ ಭಾವವು ಜನತೆಯಲ್ಲಿ ಮೂಡಬೇಕು. ಈ ಸುಭದ್ರ ಆಧ್ಯಾತ್ಮಿಕ ತಳಹದಿಯ ಮೇಲೆಯೇ ಭಾರತದ ವಿವಿಧ ಧರ್ಮ ಪಂಥಗಳಲ್ಲಿ ಭಾವಾತ್ಮ ಐಕ್ಯವು ಸಜೀವವೂ, ಶಾಶ್ವತವೂ ಆಗಿ ನೆಲಸಬಲ್ಲದು. ದುರಾಗ್ರಹವು ನಷ್ಟವಾಗಿ ನಿರಭಿಮಾನಿ ಕೇವಲ ಸತ್ಯದ ಉಪಾಸನೆಯ ದೃಷ್ಟಿಯು ಕನ್ನಡ ಜನತೆಯಲ್ಲಿ ವಿಕಸಿತವಾಗಿ ನಾಡಿನಲ್ಲಿ ಚಿರಶ್ಶಾಂತಿ ನೆಲಸುವುದು ದಂಡ ಶಕ್ತಿಯಿಂದಲ್ಲ, ಕಾನೂನಿನಿಂದಲ್ಲ, ಆದರೆ ಜನರ ಆತ್ಮಸ್ಫೂರ್ತಿ ಪ್ರೊ. ರಾನಡೆಯವರ ಈ ಮಾತು ಸಹಜವಾಗಿದೆ.

ಎಲ್ಲ ದೇಶಗಳು, ಎಲ್ಲಕಾಲಗಳು, ಅನುಭಾವಿಗಳು, ಅಪರೋಕ್ಷಜ್ಞಾನಿಗಳು, ಒಂದೇ ಆಧ್ಯಾತ್ಮಿಕ ಜಗತ್ತಿನ ನಿವಾಸಿಗಳು, ಅವರು ಒಂದೇ ಭಾಷೆಯನ್ನಾಡುವರು, ಅವರಲ್ಲಿ ಕುಲ, ಜಾತಿ, ರಾಷ್ಟ್ರಗಳ ಪೂರ್ವಾ ಗ್ರಹಗಳಿರುವುದಿಲ್ಲ, ಅನಂತ ಹಾಗೂ ಶಾಶ್ವತ ರೂಪದ ಅವರ ಆಧ್ಯಾತ್ಮಿಕ ಅನುಭವದಲ್ಲಿ ಕಾಲ ಸ್ಥಳಗಳಿಗೆ ಎಡೆಯಿರುವುದಿಲ್ಲ. ಇವರೆಲ್ಲರೂ ದೈವೀಸಂಗೀತಗಾರರು. ತಮ್ಮ

ತಮ್ಮ ಮಧುರಾಲಾಪಗಳನ್ನು ಹಾಡುತ್ತ, ಇವರು ವಿಶ್ವದಲ್ಲಿ ಅದ್ಭುತ ಸ್ವರಮೇಳವನ್ನೇ ಸೃಷ್ಟಿಸುವರು.

ಮಾನವ ಕಲ್ಯಾಣದ ಮಾರ್ಗವನ್ನು ಸಾಧಿಸಿ ಆಚರಿಸಿದ ಮಹಾನುಭಾವರ ಸಂದೇಶವನ್ನು ಮರೆತು ಧರ್ಮದ ಅಂತಸ್ಸತ್ವವನ್ನು ಅರಿಯದೆ, ಧರ್ಮದ ಹೆಸರಿನಲ್ಲಿ ನಡೆಯುತ್ತಿರುವ ಘಟನೆಗಳು ಮಾನವ ಜೀವನವನ್ನೇ ತಲ್ಲಣಗೊಳಿಸುತ್ತಾ ಇವೆ. ಸೆಪ್ಟೆಂಬರ್ ಹನ್ನೊಂದರಂದು ಅಮೇರಿಕದಲ್ಲಿ ನಡೆದ ಆಘಾತ, ಡಿಸೆಂಬರ್ ೧೩ ರಂದು ದೆಹಲಿ ಪಾರ್ಲಿಮೆಂಟ್‌ನಲ್ಲಿ ನಡೆದ ಘಟನೆ, ಕೊಲ್ಕತ್ತದಲ್ಲಿ ನಡೆದ ಘಟನೆ, ಗುಜರಾತಿನ ಗೋದ್ರಾದಲ್ಲಿ ನಡೆದ ಘಟನೆ, ಎಲ್ಲವನ್ನು ಚಿಂತನೆ ಮಾಡಿದಾಗ ಮಾನವ ಎತ್ತಸಾಗುತ್ತಿದ್ದಾನೆ ಎನ್ನುವುದನ್ನು ಹೇಳುವುದು ಸಾಧ್ಯವಾಗುವುದಿಲ್ಲ. ''ಅಹಿಂಸಾ ಪರಮೋಧರ್ಮಃ'' ''ದಯವೇ ಧರ್ಮ ಮೂಲ'' ಎನ್ನುವ ಸೂತ್ರಗಳ ಏಕತೆಯು ಅಳಿದು ಇಂದು ಅಲ್ಲಲ್ಲಿ ಧರ್ಮದ ಹೆಸರಿನಲ್ಲಿ ಆಗುತ್ತಿರುವ ಘರ್ಷಣೆಗಳು, ಹೀನ ಕೃತ್ಯಗಳು ಮಾನವತ್ವದ ಅಸ್ತಿತ್ವನ್ನೇ ಅಲ್ಲಾಡಿಸುವಂತಾಗಿದೆ. ಯಾವುದೇ ಸರ್ಕಾರದವರು ಮಾನವೀಯತೆಯ ಮಹಾ ಪೋಷಕರಾಗಬೇಕಾಗಿದೆ. ದ್ವೇಷದಿಂದ ದ್ವೇಷವನ್ನು ಗೆಲ್ಲುತ್ತೇವೆನ್ನುವ ಮೌಢ್ಯವನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸುವ ಕಾರ್ಯವನ್ನು ಮಾಡಬೇಕಾಗಿದೆ. ಬೃಹದಾಕಾರವಾಗಿರತಕ್ಕ ರಾಷ್ಟ್ರ ಸಮಸ್ಯೆಗಳಿಗೆ ಆದ್ಯಗಮನ ಕೊಡಬೇಕಾಗಿದೆ. ವಿಶಾಲ ಭಾವನೆಯಿಂದ ಪರಸ್ಪರ ವಿಚಾರ ವಿನಿಮಯ ಮಾಡಿ ಸಮಸ್ಯೆಗಳನ್ನು ಬಗೆಹರಿಸಿ ಕೊಳ್ಳಬೇಕಾಗಿದೆ.

ಬಸವಣ್ಣನವರ ಮಹಾಮಾರ್ಗದರ್ಶನದಲ್ಲಿ ರೂಪಿತವಾದ ಶರಣ ಧರ್ಮ ಸಮನ್ವಯ ಧರ್ಮ, ಸಮತಾ ಧರ್ಮ, ಸರ್ವ ಕಲ್ಯಾಣ ಧರ್ಮ, ಕಾಯಕ ದಾಸೋಹ ತತ್ವಗಳ ಆಚರಣೆಯಿಂದ ರೂಪುಗೊಂಡ ಆರ್ಥಿಕ ಸಮಾನತೆ, ಜಾತ್ಯತೀತ, ವರ್ಗ ರಹಿತ, ವರ್ಣರಹಿತ ಸಮಾಜ, ಸಮಾನತೆ, ಸ್ತ್ರಿ ಸಮಾನತೆ, ಧಾರ್ಮಿಕ ಸಮಾನತೆಗಳನ್ನೂ ಪ್ರತಿವ್ಯಕ್ತಿಯೂ ಸಾಧಿಸಬೇಕಾಗಿದೆ. ಆಧ್ಯಾತ್ಮಿಕ ಔನ್ನತ್ಯವನ್ನು ಹೊಂದಬೇಕಾಗಿದೆ. ಆತ್ಮವಿಶ್ವಾಸ ದರ್ಶನವೆಂಬ ಮಹಾತತ್ವಗಳನ್ನೊಳಗೊಂಡ ಧರ್ಮ - ಶರಣ ಧರ್ಮ.

ಶ್ರೀಮಠ ಕಾಯಕ-ದಾಸೋಹತತ್ವಗಳ ಗುರುಪಥ ಗಾಮಿಯಾಗಿ ನಡೆದು ಬರುವಂತೆ ಆಶೀರ್ವದಿಸಿದವರು ನಮ್ಮ ಪೂಜ್ಯ ಗುರುಗಳು. ಅವರದು ಉದಾತ್ತ ಮನೋಧರ್ಮ, ದೂರದೃಷ್ಟಿಯಾಗಿತ್ತು. ಎಲ್ಲರೂ ನನಗಾಗಿ ಎಂದವರಲ್ಲ, ನಾನು ಎಲ್ಲರಿಗಾಗಿ ಎಂಬ ಸೇವಾ ಮಾರ್ಗದ ಬೆಳಕು ತೋರಿದವರು. ಶ್ರೀಮಠವನ್ನು ಯಾವುದೇ ಒಂದು ಸಮಾಜಕ್ಕೆ ಸೀಮಿತಿಗೊಳಿಸದೆ ಸರ್ವರಿಗೂ ಸಮಪಾಲು, ಸಹಬಾಳ್ವೆ ಎಂಬುದನ್ನು ನಡೆದು ತೋರಿಸಿದ ಆದರ್ಶ ಪವಿತ್ರ ಚೇತನರು. ವಿದ್ಯೆಯನ್ನು ಮುಚ್ಚಿಟ್ಟ ದಿನಗಳಲ್ಲಿ ದೀನರಿಗೆ, ದಲಿತರಿಗೆ, ಹಿಂದುಳಿದವರಿಗೆ ಅಕ್ಷರ ಬೆಳಕನ್ನು ನೀಡಿದರು. ಪೂಜ್ಯರು ತೋರಿದ ಹಾದಿಯಲ್ಲಿ ನಾವು ನಡೆದಿದ್ದೇವೆ ಎಂಬ ತೃಪ್ತಿ ನಮಗಿದೆ. ಆದರೆ ಒಳದನಿ ಕೇಳುತ್ತಲೇ ಇದೆ ಲೋಕಸಂಗ್ರಹ ಚರ್ಯಯೇನೋ ಮಾಡಿದ್ದಾಯಿತು. ಆತ್ಮಶಕ್ತಿ ಎಷ್ಟು ಬೆಳೆಯಿತು ? ಎನ್ನುತ್ತಿದೆ. ಸ್ವಾಮಿಗಳಾದವರು ಕೇವಲ ಐಹಿಕ ಅಭಿವೃದ್ಧಿಯನ್ನೇ ಸಾಧನೆ ಸಿದ್ಧಿ ಎಂದು ಭಾವಿಸಿದರಾಗದು. ಆತ್ಮ ಸಂಪತ್ತು ಬೆಳೆಸಿಕೊಳ್ಳಬೇಕು. ಅದು ಲೋಕ ಕಲ್ಯಾಣಕ್ಕೆ ಅವಶ್ಯ ಎಂದರಿಯಬೇಕು.

ಇನ್ನು ಇಂದು ಭ್ರಷ್ಟಾಚಾರವೇ ಶಿಷ್ಟಾಚಾರದ ವೇಷ ತೊಟ್ಟಿದೆ. ಶೀಲ ಶೂನ್ಯತೆಯೇ ಸಭ್ಯತೆಯ ಉಡುಪು ತೊಟ್ಟಿದೆ. ಶೋಷಣೆಯೇ ಸಾಮ್ಯವಾದದ ಸೋಗು ಹಾಕಿದೆ. ಮೋಸವೇ ಲೇಸಿನ ಅಭ್ಯಾಸ ಹುಟ್ಟಿಸಿದೆ. ಜಾತೀಯತೆ ರಾಷ್ಟ್ರೀಯತೆಗೆ ಸಮಾಧಿ ಕಟ್ಟುತ್ತಿದೆ. ಸ್ವೈರ ವೃತ್ತಿ ಸ್ವಾತಂತ್ರ್ಯದ ಕುತ್ತಿಗೆ ಹಿಸುಕುತ್ತಿದೆ. ತತ್ವ ರಹಿತ ರಾಜಕಾರಣ, ಶ್ರಮರಹಿತ ಸಂಪತ್ತು, ನೀತಿಹೀನ ವ್ಯಾಪಾರ, ಶೀಲಶೂನ್ಯ ಶಿಕ್ಷಣ, ಮನಸಾಕ್ಷಿಯಿಲ್ಲದ ಭೋಗ, ಮನುಷ್ಯತ್ವರಹಿತ ವಿಜ್ಞಾನ, ತ್ಯಾಗವಿಹೀನ ಪೂಜೆ ಮುಂತಾದ ಅನಿಷ್ಟಗಳೆಲ್ಲ ವಿಶ್ವವನ್ನು, ರಾಷ್ಟ್ರವನ್ನು ಕಿತ್ತು ತಿನ್ನುತ್ತಿವೆ. ಮೊನ್ನೆ ಅಮೆರಿಕಾದಲ್ಲಿ ಆದ, ದೆಹಲಿಯ ಸಂಸತ್ ಭವನದ ಮೇಲಾದ, ನಿನ್ನೆ ಗುಜರಾತ್ ಗೋದ್ರದಲ್ಲಿ ನಡೆದ, ಕಾಶ್ಮೀರದಲ್ಲಿ ಆಗುತ್ತಿರುವ ಮರಣ ಹೋಮ ಏನನ್ನು ತಿಳಿಸುತ್ತವೆ ? ನಾಗರಿಕ ಮಾನವ ಸುಸಂಸ್ಕೃತನಾಗುತ್ತಿಲ್ಲ. ಮೃಗವಾಗುತ್ತಿದ್ದಾನೆ ಎಂಬುದನ್ನಲವೆ ? ಇಂದು ಜಗತ್ತಿಗೆ ಬೇಕಾಗಿರುವುದು ಮಂದಿರ ಮಸೀದಿಗಳಲ್ಲ, ಅನ್ನ, ವಿದ್ಯೆ, ಮಾನವೀಯತೆ ಎಂಬುದನ್ನು ಮನಗಾಣಬೇಕಾಗಿದೆ. ಯಾವುದೇ ಧರ್ಮ ಬೆಂಕಿಯಾಗಬಾರದು ಬೆಳಕಾಗಬೇಕು.

**ಕೊನೆಯದಾಗಿ**

ಶ್ರೀಮಠದ ಕಿಂಚಿತ್ ಸೇವೆಯನ್ನು ಮೆಚ್ಚಿ ಮಾತಾಡಿದ್ದೀರಿ. ಸಂಸ್ಥೆ ಬೆಳೆಯಲು ನಾನಾ ರೂಪದಲ್ಲಿ ಸಹಾಯ ಮಾಡಿದ್ದೀರಿ, ಸಹಕರಿಸಿದ್ದೀರಿ, ಗ್ರಾಮೀಣ ಬಂಧು ಭಗಿನಿಯರು, ನಗರ ಪಟ್ಟಣಗಳ ಉದಾರಿಗಳು ಪವಿತ್ರ ಭಾವನೆಯಿಂದ ನೀಡಿದ ಧನ ಧಾನ್ಯಗಳು, ಸಾವಿರಾರು ಮಕ್ಕಳ ಭವಿಷ್ಯದ ಬದುಕಿಗೆ ಶಕ್ತಿಕೊಟ್ಟಿತು. ನಾವು ಲಿಂಗ ಪೂಜೆ ಮಾಡುವಾಗ ಆಗುವ ಆನಂದವನ್ನೇ ಎಳೆಯ ಮಕ್ಕಳು ಪ್ರಸಾದ ಸ್ವೀಕರಿಸಿ ಸಂತೋಷವಾಗಿ ಮಾತಾಡಿಕೊಂಡು ಹೋಗುವುದನ್ನು ಕಂಡಾಗಲೂ ಆನಂದವನ್ನು ಅನುಭವಿಸುತ್ತೇವೆಂಬ ಸಂತೋಷವನ್ನು ನಿಮ್ಮೊಂದಿಗೆ ಹಂಚಿಕೊಳ್ಳಲು ಹರ್ಷಿಸುತ್ತೇವೆ. ''ವಿದ್ಯಾರ್ಥಿ ದೇವೋಭವ'' ಎಂಬುದೇ ನಮಗೆ ಮಂತ್ರ, ಜಪ-ತಪವೆನ್ನಲು, ರಾಷ್ಟ್ರ ಸೇವೆಯೆನ್ನಲು ಆಶೀಸುತ್ತೇವೆ.







## ಶಿಕ್ಷಣ ಬಂಗಾರ ಡಾ. ಪಿ. ಸೆಲ್ವಿದಾಸ್



*ಶ್ರೀಕ್ಷೇತ್ರದಲ್ಲಿ ಪ್ರತಿವರ್ಷ ನಡೆಯುವ ಶ್ರೀ ಗುರು ವಂದನಾ ಸಮಾರಂಭದ ಸಂದರ್ಭದಲ್ಲಿ ಕಳೆದ ಅನೇಕ ವರ್ಷಗಳಿಂದ ನಾಡಿನ ವಿವಿಧ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿದ ಗಣ್ಯರನ್ನು ಗೌರವಿಸಲಾಗುತ್ತದೆ. ಅದರಂತೆ ಈ ವರ್ಷವೂ ಮೊದಲ ದಿನ ಡಾ. ಪಿ. ಸೆಲ್ವಿದಾಸ್, ಡಾ. ಚಂದ್ರಶೇಖರ ಶೆಟ್ಟಿ, ಡಾ. ಗುರುಲಿಂಗ ಕಾಪಸೆ ಹಾಗೂ ಶ್ರೀ ಬಿ.ಎಸ್. ದೇವರಾಜ್ ಅವರನ್ನು, ಎರಡನೆ ದಿನ ಶ್ರೀ ಯಜಮಾನ್ ಶ್ರೀಕಂಠಪ್ಪ, ಮತ್ತು ಶ್ರೀ ಟಿ. ತಿಮ್ಮಪ್ಪ ಅವರನ್ನು ಪರಮ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಶ್ರೀಮಠದ ಭಕ್ತಾಧಿಗಳು, ಅಭಿಮಾನಿಗಳು, ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳ ಸಮ್ಮುಖದಲ್ಲಿ ಫಲತಾಂಬೂಲ ನೀಡಿ, ಶಾಲು ಹೊದಿಸಿ, ನೆನಪಿನ ಕಾಣಿಕೆ ನೀಡಿ ಆಶೀರ್ವದಿಸಿದರು. ಈ ಆರು ಜನ ಮಹನೀಯರ ಸಂಕ್ಷಿಪ್ತ ಪರಿಚಯವನ್ನು ಇಲ್ಲಿ ಮಾಡಿ ಕೊಡಲಾಗಿದೆ.*

ಕೋಲಾರ ಜಿಲ್ಲೆ ಬಂಗಾರವನ್ನು ಕೊಟ್ಟದ್ದು ಮಾತ್ರವಲ್ಲ ಬಂಗಾರದಂಥ ವ್ಯಕ್ತಿಗಳನ್ನು, ಶ್ರೇಷ್ಠಮಾನವರತ್ನಗಳನ್ನು, ಸುಸಂಸ್ಕೃತಶೀಲರನ್ನು, ಶಿಕ್ಷಣ ತಜ್ಞರನ್ನು, ರಾಷ್ಟ್ರ ನಿರ್ಮಾಣ ಶಿಲ್ಪಿಗಳನ್ನು ನೀಡಿದ ಧನ್ಯ ಜಿಲ್ಲೆ. ಇಂಥ ಚಿನ್ನದ ನಾಡಿನಲ್ಲಿ ಕೆ.ಜಿ.ಎಫ್.ನಲ್ಲಿ ಡಾ. ಪಿ. ಸೆಲ್ವಿದಾಸ್ ಅವರು ದಿನಾಂಕ ೨೯-೯-೧೯೩೨ರಂದು ಗೌರವಾನ್ವಿತ ಕುಟುಂಬದಲ್ಲಿ ಹುಟ್ಟಿದವರು. ದಲಿತ ವರ್ಗದಿಂದ, ಆರ್ಥಿಕವಾಗಿ ಹಿಂದುಳಿದ ಮನೆತನದಿಂದ ಬಂದವರಾದರೂ ಸ್ಥಿರ ಸಂಕಲ್ಪದ ನಿರಂತರ ಸಾಧನೆಯಿಂದಾಗಿ ಉನ್ನತ ಪದವೀಧರರಾಗಿ ವೃತ್ತಿ ಜೀವನವನ್ನು ಆರಂಭಿಸಿದ ದಿಟ್ಟ ಮಹಿಳೆಯೆನಿಸಿದರು. ಪ್ರಾರಂಭಕ್ಕೆ ಮೈಸೂರಿನಲ್ಲಿರುವ ಕೇಂದ್ರ ಆಹಾರ ಸಂಶೋಧನಾ ಸಂಸ್ಥೆಯಲ್ಲಿ ಸಂಶೋಧನಾ ಸಹಾಯಕಿಯಾಗಿ ನಂತರ ಶಿಕ್ಷಣ ಕ್ಷೇತ್ರವನ್ನು ಪ್ರವೇಶಿಸಿದರು. ವಿಶ್ವವಿದ್ಯಾಲಯ ಕ್ಷೇತ್ರದಲ್ಲಿ ಉಪನ್ಯಾಸಕಿಯಾಗಿ, ಪ್ರವಾಚಕರಾಗಿ, ಪ್ರಾಧ್ಯಾಪಕರಾಗಿ, ಪ್ರಾಚಾರ್ಯರಾಗಿ, ಕಾಲೇಜು ಶಿಕ್ಷಣದ ನಿರ್ದೇಶಕರಾಗಿ ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳಾಗಿ ಸೇವೆಗೈದ ಪ್ರಥಮ ಮಹಿಳಾ ಕುಲಪತಿಯೆನಿಸಿದರು.

ಜೀವನದುದ್ದಕ್ಕೂ ಸೇವಾಮನೋಧರ್ಮವನ್ನು ಮೈಗೂಡಿಸಿಕೊಂಡು ಮುನ್ನಡೆದ ಡಾ. ಸೆಲ್ವಿದಾಸ್ ಅವರದು ಬಹುಮುಖಿ ವ್ಯಕ್ತಿತ್ವ, ೧೯೯೧-೯೭ರವರೆಗೆ ಕೇಂದ್ರ ಲೋಕಸೇವಾ ಆಯೋಗದ ಸದಸ್ಯರಾಗಿ, ೧೯೮೮-೯೧ರವರೆಗೆ ವಿಶ್ವವಿದ್ಯಾಲಯ ಅನುದಾನ ಸಮಿತಿಯ ಸದಸ್ಯರಾಗಿ, ೧೯೭೧-೭೩ರವರೆಗೆ ಯು.ಎಸ್.ಎ.ದ ಕೊಲೊರಾಡೋ ವಿಶ್ವವಿದ್ಯಾಲಯದಲ್ಲಿ ಸಹಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದವರಾಗಿದ್ದಾರೆ.

ಉತ್ತಮ ಶೈಕ್ಷಣಿಕ ಅರ್ಹತೆಯನ್ನು ಪಡೆದಿರುವ ಡಾ. ದಾಸ್ ಅವರು ಉತ್ತಮ ಸಂಶೋಧನಾತ್ಮಕ ಕ್ರಿಯಾಶೀಲ ವ್ಯಕ್ತಿಗಳೆನಿಸಿದ್ದಾರೆ. ಬಾಲವಾಡಿ ಮಾದರಿಗಳಿಗಾಗಿ ಶ್ರಮಿಸಿದ್ದಾರೆ. ಯು.ಎಸ್.ಎ.ದ ನಾರ್ತ್ ಕರೋಲಿನಾ ವಿಶ್ವವಿದ್ಯಾಲಯದಿಂದ ಪಿ.ಹೆಚ್.ಡಿ. ಪದವಿಗಳಿಸಿರುವ ಡಾ. ಸೆಲ್ವಿದಾಸ್ ಅವರು ಅನೇಕ ಸಂಶೋಧನಾ ವಿದ್ಯಾರ್ಥಿಗಳಿಗೆ ಎಂ.ಎಸ್., ಎಂ.ಫಿಲ್., ಪಿ.ಹೆಚ್.ಡಿ.ಗಳಿಗೆ ಮಾರ್ಗದರ್ಶನ ಮಾಡಿರುತ್ತಾರೆ. ಅನೇಕ ಪ್ರತಿಷ್ಠಿತ ಸಂಸ್ಥೆಗಳಲ್ಲಿ ಸದಸ್ಯರಾಗಿ ಸೇವೆಸಲ್ಲಿಸಿದ್ದಾರೆ. ವಿಶ್ವವಿದ್ಯಾಲಯ ಅನುದಾನ ಸಮಿತಿಯ ಸದಸ್ಯರಾಗಿ, ಭಾರತ ಸರ್ಕಾರದ ಅಂಬೇಡ್ಕರ್ ಶತಮಾನೋತ್ಸವ ಸಮಿತಿಯ ಪರಿಶಿಷ್ಟ ಜಾತಿ/ಬುಡಕಟ್ಟಿನ ಸದಸ್ಯರಾಗಿ, ಕರ್ನಾಟಕ ವಿಶ್ವವಿದ್ಯಾಲಯಗಳ ಶೈಕ್ಷಣಿಕ ಮಂಡಳಿಗಳ ಸದಸ್ಯರಾಗಿ, ಪುಟಪರ್ತಿ ಶ್ರೀ ಸತ್ಯಸಾಯಿ ಉನ್ನತ ಶಿಕ್ಷಣ ಸಂಸ್ಥೆಯ ಶೈಕ್ಷಣಿಕ ಮತ್ತು ಆಡಳಿತ ಸಮಿತಿಯ ಸದಸ್ಯರಾಗಿ ಸೇವೆಸಲ್ಲಿಸಿ ಕೀರ್ತಿಭಾಜನರಾಗಿದ್ದಾರೆ.

ಡಾ. ಸೆಲ್ವಿದಾಸರದು ರಾಷ್ಟ್ರೀಯ ಹಾಗೂ ಅಂತರರಾಷ್ಟ್ರಿಯ ವ್ಯಕ್ತಿತ್ವ. ಅವರು ಅನೇಕ ಸಮ್ಮೇಳನಗಳಲ್ಲಿ ಭಾಗವಹಿಸಿದ್ದಾರೆ. ಕೇಂದ್ರ ಲೋಕಸೇವಾ ಆಯೋಗ, ಕರ್ನಾಟಕ ಲೋಕಸೇವಾ ಆಯೋಗದ ಸಲಹೆಗಾರರಾಗಿ, ಕರ್ನಾಟಕ ವಿಶ್ವವಿದ್ಯಾಲಯಗಳ ಅಕಾಡೆಮಿಕ್ ಕೌನ್ಸಿಲ್, ಸಿಂಡಿಕೇಟ್, ಸೆನೆಟ್‌ಗಳ ಸದಸ್ಯರಾಗಿ ಸೇವೆಸಲ್ಲಿಸಿದ್ದಾರೆ. ಮೈಸೂರು ವಿಶ್ವವಿದ್ಯಾಲಯದ ಕುಲಪತಿಗಳಾಗಿ ಮಹಿಳಾ ಅಧ್ಯಯನ ಕೇಂದ್ರವನ್ನು ಮಾನವ ಹಕ್ಕುಗಳ ಕಾರ್ಯಕ್ರಮಗಳಂತಹ ಯೋಜನೆಗಳನ್ನು ಡಾ. ಅಂಬೇಡ್ಕರ್ ಅವರನ್ನು ಕುರಿತು ಉಪನ್ಯಾಸ, ವಿಚಾರ ಸಂಕಿರಣಗಳನ್ನು ಏರ್ಪಡಿಸಿದ ಯಶಸ್ಸು ಅವರದ್ದಾಗಿದೆ. ಕಾಲೇಜು ಶಿಕ್ಷಣದ ನಿರ್ದೇಶಕರಾಗಿ ಡಾ. ಸೆಲ್ವಿದಾಸ್ ಅವರು ಸ್ಮರಣೀಯ ಸೇವೆಗೈದಿದ್ದಾರೆ. ಸರ್ಕಾರದಿಂದ ರೂಪಿತವಾದ ಅನೇಕ ಸಮಿತಿಗಳಲ್ಲಿ ಅಧ್ಯಕ್ಷರಾಗಿ ದುಡಿದ ಕೀರ್ತಿ ಅವರದ್ದಾಗಿದೆ.

ಉತ್ತಮ ಲೇಖಕಿಯರೂ ಆಗಿರುವ ಡಾ. ದಾಸ್ ಅವರು ವಿದ್ವತ್ಪೂರ್ಣ ಲೇಖನಗಳನ್ನು, ಕೃತಿಗಳನ್ನು ಪ್ರಕಟಿಸಿದ್ದಾರೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಹೆಸರಿಸಲು ಸಂತೋಷವಾಗುತ್ತದೆ. ಶ್ರೀ ಸತ್ಯಸಾಯಿ ಫಿಲಾಸಫಿ ಆಫ್ ಎಜುಕೇಷನ್, ಪರ್‌ಸ್ಯೂಟ್ ವ್ಯಾಲ್ಯೂಸ್ ಇನ್ ದಿ ಚೇಂಜಿಂಗ್ ಸೊಸೈಟಿ, ಗೃಹವಿಜ್ಞಾನದ ಸಂಪಾದನೆ ಮುಂತಾದವು.

''ರೋಲ್ ಮಾಡೆಲ್ಸ್ ಪ್ರಶಸ್ತಿ'' ಪುರಸ್ಕೃತರಾಗಿರುವ ಡಾ. ಸೆಲ್ವಿದಾಸ್ ಅವರು ರಾಜ್ಯಸಭಾ ಸದಸ್ಯರಾಗಿ ಅತ್ಯುತ್ತಮ ಬುದ್ಧಿ ಜೀವಿಗಳೆಂದು, ಕ್ರಿಯಾಶೀಲರೆಂದು ಮೆಚ್ಚುಗೆ ಗಳಿಸಿರುವುದು ಹೆಮ್ಮೆತರುವಂತಹುದು. ತತ್ವಜ್ಞಾನ ಪ್ರಿಯರೆನಿಸಿರುವ ಮಹಿಳಾ ಮಣಿಯಾಗಿರುವ ಡಾ. ದಾಸ್ ಅವರು ವಿದ್ಯೆ ಬಾಳಿನ ಬೆಳಕಿಗಾಗಿಯೇ ಹೊರತು, ಕೇವಲ ಜೀವನೋಪ ಯೋಗಕ್ಕಾಗಿಯಲ್ಲ ಎಂದು ನಂಬಿರುವವರು. ವಿದ್ಯೆ ವ್ಯಕ್ತಿತ್ವ ನಿರ್ಮಾಣಕ್ಕಾಗಿ, ಗುಣಸಂವರ್ಧನೆಗಾಗಿ ಎನ್ನುವವರು. ವಿದ್ಯೆ ಸೇವೆಯ ಜೀವನವಿಧಾನವನ್ನು ಕಲಿಸಿಕೊಡಬೇಕು ಎನ್ನುತ್ತಾರೆ. ದಲಿತ ವರ್ಗದಿಂದ ಬಂದ ಮಹಿಳೆಯಾಗಿದ್ದು, ಆ ವರ್ಗದ ಮಹಿಳಾ ಜಾಗೃತಿಗಾಗಿ ಹಗಲಿರುಳು ಶ್ರಮಿಸುತ್ತಿರುವುದು ಸ್ತುತ್ಯರ್ಹವಾಗಿದೆ.

ಡಾ. ಸೆಲ್ವಿದಾಸ್ ಅವರದು ತ್ಯಾಗಮಯ ಜೀವನ. ಬಾಲ್ಯದಲ್ಲಿಯೇ ತಂದೆಯನ್ನು ಕಳೆದುಕೊಂಡರಾದರೂ, ಐವರು ಸೋದರರಿಗಾಗಿ, ನಾಲ್ವರು ಸೋದರಿಯರಿಗಾಗಿ ತಾವು ತ್ಯಾಗಮಾರ್ಗದಲ್ಲಿ ನಡೆದು ಬಂದ ಸುಸಂಸ್ಕೃತರು. ಅಪರೂಪದ ಉದಾಹರಣೆಯಾಗಿ ಉಳಿದು ಬಂದವರು.

ಡಾ. ದಾಸ್ ಅವರು 'ಸೆಲ್ವಿ' ಎಂದು ತಂದೆ ತಾಯಿಗಳಿಂದ ನಾಮಾಂಕಿತರಾದವರು. 'ಸೆಲ್ವಿ' ಎಂದರೆ 'ಚೆಲುವೆ, ಸುಂದರಿ' ಎನ್ನುತ್ತಾರೆ. ಹೌದು, ತ್ಯಾಗ ಜೀವನದ ಪ್ರತೀಕದಂತಿರುವ ಡಾ. ಸೆಲ್ವಿದಾಸ್ ಅವರು ನಿಜಕ್ಕೂ ಚೆಲುವಿಯಾಗಿದ್ದಾರೆ. ತ್ಯಾಗ, ಸದ್ಗುಣಗಳ ಸುಂದರಿಯೆನಿಸಿದ್ದಾರೆ. ಈ ತ್ಯಾಗ ಸುಂದರಿಯನ್ನು ೧೯೮೮ರಲ್ಲಿ ಕರ್ನಾಟಕ ಸರ್ಕಾರ ರಾಜ್ಯೋತ್ಸವ ಪ್ರಶಸ್ತಿಯನ್ನಿತ್ತು ಗೌರವಿಸಿದೆ. ಡಾ. ದಾಸ್ ಅವರು ಶ್ರೀ ಸಿದ್ಧಗಂಗಾ ಮಠದ ಬಗ್ಗೆ ಆದರಾಭಿಮಾನ ಭಕ್ತಿ ಶ್ರದ್ಧೆಗಳಿಟ್ಟಿರುವುದನ್ನು ಗಮನಿಸಿದ ಶ್ರೀಮಠದ ಭಕ್ತಾದಿಗಳು, ಅಭಿಮಾನಿಗಳು, ಹಳೆಯ ವಿದ್ಯಾರ್ಥಿಗಳು ಮತ್ತು ಶ್ರೀಮಠದ ಶಿಕ್ಷಣ ಸಂಸ್ಥೆಗಳಲ್ಲಿರುವ ಸೇವಾಬಂಧುಗಳು 'ಶಿಕ್ಷಣ ಬಂಗಾರ', ಎಂದು ಗೌರವಿಸಿ ಸನ್ಮಾನಿಸಲಾಯಿತು.

☆

## ನೇತ್ರಭಾಸ್ಕರ
## ಡಾ. ಎಸ್. ಚಂದ್ರಶೇಖರ ಶೆಟ್ಟಿ



ಕಣ್ಣಿನಿಂದಲೆ ಇಹವು ಕಣ್ಣಿನಿಂದಲೆ ಪರವು ಕಣ್ಣಿನಿಂದಲೆ ಸಕಲ ಸಂಪದವು ಕಣ್ಣೇ ಜಗವ ತಿಳಿವುದಕೆ ಸಾಧನವು ಎಂಬುದನ್ನು ಜೀವನವ್ರತವನ್ನಾಗಿಸಿಕೊಂಡಿರುವ ಡಾ. ಎಸ್. ಚಂದ್ರಶೇಖರ ಶೆಟ್ಟಿಯವರು ದಕ್ಷಿಣ ಕನ್ನಡ ಜಿಲ್ಲೆಯ ಸುನ್ನಾರಿ-ಕುಂದಾಪುರದಲ್ಲಿ ೧೯೪೩ರಲ್ಲಿ ಜನ್ಮತಾಳಿದರು. ತಂದೆ ಶ್ರೀ ಕಾಪು ಸಂಜೀವಶೆಟ್ಟಿ (ಮಾಜಿ ವಿಧಾನಸಭಾ ಸದಸ್ಯರು) ತಾಯಿ ಶ್ರೀಮತಿ ಪಾರ್ವತಿ ಅವರು; ಬಾಲ್ಯ ವಿದ್ಯಾಭ್ಯಾಸ ಕಾಳಾವರ, ಕೋಟೇಶ್ವರಗಳಲ್ಲಿ ನಡೆಯಿತು. ೧೯೬೮ರಲ್ಲಿ ಮೈಸೂರು ವಿಶ್ವವಿದ್ಯಾಲಯದಿಂದ ಎಂ.ಬಿ.ಬಿ.ಎಸ್., ಪದವಿ, ೧೯೭೩ರಲ್ಲಿ ಬೆಂಗಳೂರು ಮೆಡಿಕಲ್ ಕಾಲೇಜಿನಿಂದ ಎಂ.ಎಸ್. ಪದವಿಯನ್ನು ಪಡೆದರು.

ನೇತ್ರ ವಿಜ್ಞಾನದಲ್ಲಿ ನೈಪುಣ್ಯತೆಯನ್ನು ಪಡೆದ ಶ್ರೀಯುತರು ಅಧ್ಯಾಪಕರಾಗಿ ವೃತ್ತಿ ಜೀವನವನ್ನಾರಂಭಿಸಿ ಹಂತ ಹಂತವಾಗಿ ವಿವಿಧ ಹುದ್ದೆಗಳನ್ನು ಅಲಂಕರಿಸುತ್ತಾ ಮುನ್ನಡೆದರು. ವಹಿಸಿಕೊಂಡ ಎಲ್ಲ ಹುದ್ದೆಗಳನ್ನೂ ಸಮರ್ಥವಾಗಿ ನಿರ್ವಹಿಸುತ್ತ ಘನತೆ ಗೌರವಗಳ ಕಿರೀಟವನ್ನು ಆ ಸ್ಥಾನಗಳಿಗೆ ತೊಡಿಸಿದ ಕಾರ್ಯಕ್ಷಮತ್ವವನ್ನು ಪ್ರದರ್ಶಿಸಿದರು. ವೈದ್ಯಕೀಯ ಅಧೀಕ್ಷಕರಾಗಿ, ಬೆಂಗಳೂರಿನ ಮಿಂಟೋ ಕಣ್ಣಾಸ್ಪತ್ರೆಯ ನಿರ್ದೇಶಕರಾಗಿ ಸಾಗರೋಪಮ ಬದಲಾವಣೆಗಳನ್ನು ತಂದು, ಶ್ರೀ ಸಾಮಾನ್ಯನಿಗೆ ಅವುಗಳ ಪ್ರಯೋಜನ ದೊರಕುವಂತೆ ಮಾಡಿದರು. ೧೯೮೭ರಲ್ಲಿ ವಿಶ್ವ ಆರೋಗ್ಯ ಸಂಸ್ಥೆಯಡಿಯಲ್ಲಿ ಲಂಡನ್ ನಗರದಲ್ಲಿ ಮೂರಿಫೀಲ್ಡ್ ಆಸ್ಪತ್ರೆಯಲ್ಲಿ ನಡೆದ ಕ್ಷೇತ್ರವಿಜ್ಞಾನ ತರಬೇತಿ ಶಿಬಿರದಲ್ಲಿ ಭಾಗವಹಿಸಿ ನೇತ್ರವಿಜ್ಞಾನ ಶಸ್ತ್ರಚಿಕಿತ್ಸಾ ಪ್ರವೀಣರೆಂದು ರಾಷ್ಟ್ರದಲ್ಲೆಲ್ಲಾ ಪ್ರಸಿದ್ಧರಾದರು.

ಡಾ. ಶೆಟ್ಟಿಯವರು ಭಾರತದ ವಿವಿಧ ವಿಶ್ವವಿದ್ಯಾಲಯ ಮತ್ತು ಭಾರತ ಸರ್ಕಾರ ರಾಷ್ಟ್ರೀಯ ಪರೀಕ್ಷಾ ಮಂಡಳಿಯ ಪರೀಕ್ಷಾ ಸಮಿತಿಗಳಲ್ಲಿ ಸಕ್ರಿಯ ಪದಾಧಿಕಾರಿಗಳಾಗಿ ಸೇವೆ ಸಲ್ಲಿಸಿರುವ ತಜ್ಞರೆನಿಸಿರುವುದು ಹೆಮ್ಮೆಯ ಸಂಗತಿ. ರಾಷ್ಟ್ರೀಯ ವಿಜ್ಞಾನ ಸಭೆಗಳಲ್ಲಿ ಭಾಗವಹಿಸಿ ೪೫ಕ್ಕೂ ಹೆಚ್ಚು ಸಂಶೋಧನಾ ಲೇಖನಗಳನ್ನು ಪ್ರಕಟಿಸಿದ್ದಾರಲ್ಲದೆ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಅನೇಕ ಪಿ.ಹೆಚ್.ಡಿ. ಸಂಶೋಧನೆಗಳಿಗೆ ಮಾರ್ಗದರ್ಶನ ಮಾಡಿದವರಾಗಿದ್ದಾರೆ.

ಡಾ. ಚಂದ್ರಶೇಖರ ಶೆಟ್ಟಿಯವರು ಸಮರ್ಥ ಹಾಗೂ ದಕ್ಷ ಆಡಳಿತಗಾರರೆಂಬುದನ್ನು ತಾವು ವಹಿಸಿಕೊಂಡ – ವೈದ್ಯಕೀಯ ಅಧೀಕ್ಷಕ, ಮಿಂಟೋ ಕಣ್ಣಾಸ್ಪತ್ರೆಯ ನಿರ್ದೇಶಕ, ಟಾಸ್ಕ್‌ಫೋರ್ಸ್ ಫಾರ್ ನೀಡ್ಸ್ ಆಫ್ ಟೀಚಿಂಗ್ ಇನ್‌ಸ್ಟಿಟ್ಯೂಷನ್ಸ್ ಮತ್ತು ಹಾಸ್ಪಿಟಲ್‌ಗಳ ಅಧ್ಯಕ್ಷರಾಗಿ ಪ್ರದರ್ಶಿಸಿದ್ದಾರೆ. ೧೯೯೯ರಿಂದ ರಾಜೀವಗಾಂಧಿ ಆರೋಗ್ಯ ವಿಶ್ವವಿದ್ಯಾಲಯದ ಕುಲಪತಿಗಳಾಗಿ ಸಂಸ್ಥೆಯ ಸರ್ವಾಂಗೀಣ ಅಭಿವೃದ್ಧಿಗಾಗಿ ಶ್ರಮಿಸುತ್ತ, ಹೊಸ ಆಯಾಮಗಳನ್ನೇ ವಿಶ್ವವಿದ್ಯಾಲಯಕ್ಕೆ ತಂದಿರುವುದು ಶ್ಲಾಘನೀಯವಾಗಿದೆ.

ಶ್ರೀಯುತರ ವೃತ್ತಿ ನೈಪುಣ್ಯತೆಯನ್ನು ಗಮನಿಸಿ ಅವರಿಗೆ ಅನೇಕ ಸಂಸ್ಥೆಗಳ ಕರ್ಣಧಾರತ್ವವನ್ನು ವಹಿಸಿಕೊಟ್ಟಿರುವುದು ಡಾ. ಶೆಟ್ಟಿಯವರ ವ್ಯಕ್ತಿತ್ವದ ಆಳ-ಅಗಲಗಳಿಗೆ ನೀಡಿದ ಗೌರವವಾಗಿದೆ. ಶ್ರೀಯುತರು ದಕ್ಷಿಣ ಇಂಡಿಯಾ ಮತ್ತು ಶ್ರೀಲಂಕಾದ ಅಂತರರಾಷ್ಟ್ರೀಯ ಲಯನ್ಸ್ ಕ್ಲಬ್‌ಗಳ ಸೈಟ್ ಫಸ್ಟ್ ಪ್ರೋಗ್ರಾಂನ ತಾಂತ್ರಿಕ ಸಲಹೆಗಾರರಾಗಿ, ಕರ್ನಾಟಕ ಸರ್ಕಾರದ ಅಂಧತ್ವ ನಿವಾರಣಾ ಯೋಜನೆಯ ನೇತ್ರವಿಜ್ಞಾನ ಸಲಹೆಗಾರರಾಗಿ, ಕರ್ನಾಟಕ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣದ ಟಾಸ್ಕ್‌ಫೋರ್ಸ್‌ನ ಸದಸ್ಯರಾಗಿ, ಎಂ.ಸಿ.ಐ., ಯು.ಜಿ.ಸಿ., ಎನ್.ಎ.ಎ.ಸಿ., ಮುಂತಾದ ಸಮಿತಿಗಳಲ್ಲಿ ಸೇವೆ ಸಲ್ಲಿಸಿದ್ದಾರೆ.

ಡಾ. ಶೆಟ್ಟಿಯವರು ಡಾ. ರುಸ್ತೋಂ ಜಿ. ರಂಜಿ ಗೋಲ್ಡ್ ಮೆಡಲ್ ಪ್ರಶಸ್ತಿ, ಆಂಧ್ರ ಅಪ್ತಾಲ್‌ಮಿಕ್ ಅಸೋಸಿಯೇಷನ್ ಅಂಡ್ ಫಸ್ಟ್ ಆಫರೇಷನ್ ಐ ಸೈಟ್ ಯೂನಿವರ್ಸಲ್ ಪ್ರಶಸ್ತಿ, ಮಣಿಪಾಲ್ ಅಕಾಡೆಮಿಯ ಉನ್ನತ ಶಿಕ್ಷಣ ಪ್ರಶಸ್ತಿಗಳ ಪುರಸ್ಕೃತರಾಗಿದ್ದಾರೆ.

ಶ್ರೀ ಯುತರು ನೇತ್ರ ವಿಜ್ಞಾನದಲ್ಲಿ ಗಣನೀಯ ಕಾಣಿಕೆ ಸಲ್ಲಿಸಿದ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ. ಮಾಲ್ದೀವ್ಸ್‌ನಲ್ಲಿ ನಡೆದ ಸಭೆಯಲ್ಲಿ (ಸಾರ್ಕ್ ದೇಶಗಳ) ನೇತ್ರ ವಿಜ್ಞಾನ ಮತ್ತು ಮಾನವೀಯ ಸೇವೆಗೆ ಪ್ರಶಸ್ತಿ ಗಳಿಸಿದ ಗಣ್ಯಮಾನ್ಯರಾಗಿದ್ದಾರೆ. ಯು.ಕೆ. ದೇಶದ ನಾಟಿಂಗ್ ಹ್ಯಾಮ್ ವಿಶ್ವವಿದ್ಯಾಲಯದ ಕ್ವೀನ್ಸ್ ಮೆಡಿಕಲ್ ಸೆಂಟರಿನ ನೇತ್ರವಿಜ್ಞಾನ ವಿಭಾಗದಿಂದ ಅಭಿನಂದಿತ ರಾಗಿರುವ ಶ್ರೀಯುತರು ಒರಿಸ್ಸಾ ರಾಜ್ಯದ ವೈದ್ಯಕೀಯ ವಿಶ್ವವಿದ್ಯಾಲಯದಿಂದ ''ಡಾಕ್ಟರ್ ಹಾನರೀಸ್ ಕಾಸ್'' ಎಂಬ ಪ್ರಶಂಸೆ ಮತ್ತು ಚಿನ್ನದ ಪದಕದೊಂದಿಗೆ ಅಲಂಕೃತರಾಗಿರುವುದು ಅಭಿಮಾನಕ್ಕೆ ಕಳಶವಿಟ್ಟಂತಾಗಿದೆ.

ಡಾ. ಚಂದ್ರಶೇಖರ ಶೆಟ್ಟಿಯವರು ಉತ್ತಮ ಕ್ರೀಡಾಪಟುಗಳು. ಮೈಸೂರು ವಿಶ್ವವಿದ್ಯಾನಿಲಯವನ್ನು ಷಟ್ಲ್ ಬ್ಯಾಡ್‌ಮಿಟನ್ ಮತ್ತು ಕರ್ನಾಟಕ ವಿಶ್ವವಿದ್ಯಾಲಯವನ್ನು ಅಧ್ಯಾಪಕರ ಟೆನಿಸ್ ಕ್ರೀಡೆಗಳಲ್ಲಿ ಪ್ರತಿನಿಧಿಸಿದ ಯಶಸ್ವಿ ಗಳೆನಿಸಿದ್ದಾರೆ.

ಸರಳ ಸಜ್ಜನಶೀಲರಾದ ಡಾ. ಶೆಟ್ಟಿಯವರು ಸುಸಂಸ್ಕೃತ ಕುಟುಂಬದ ಆದರ್ಶ ಗೃಹಸ್ಥರೆನಿಸಿದ್ದಾರೆ. ಶ್ರೀಮತಿ ವಿನಯ ಶೆಟ್ಟಿಯವರು ಧರ್ಮಪತ್ನಿಯಾಗಿ, ಇಬ್ಬರು ಪುತ್ರರತ್ನರನ್ನು ಹೆತ್ತು ಕೊಟ್ಟಿದ್ದಾರೆ. ಸತಿ-ಪತಿಗಳೊಂದಾಗಿ ಸಂಸಾರರಥವನ್ನು ಮಾನವೀಯ ಮಂಗಳ ಮಾರ್ಗದಲ್ಲಿ ಮುನ್ನಡೆಸಿ ಅನುಕರಣೀಯ ರೆನಿಸಿದ್ದಾರೆ.

ಡಾ. ಎಸ್. ಚಂದ್ರಶೇಖರ ಶೆಟ್ಟಿಯವರ ವಿನಮ್ರ ಮಾನವೀಯ ಸೇವೆಯನ್ನು, ಸದ್ಗುಣ ಸಂಪತ್ತನ್ನು, ಕತ್ತಲಾವರಿಸಿದ್ದ ಕಣ್ಣಿಲ್ಲದವರಿಗೆ ಬೆಳಕನ್ನುಂಟು ಮಾಡುವ ಅವರನ್ನು ಸನ್ಮಾನಿಸಲಾಯಿತು.

☆

# ತುಂಬಿದ ಗಂಧದ ಕೊಡ

## ಡಾ. ಗುರುಲಿಂಗ ಕಾಪಸೆ



ಸಾಹಿತ್ಯ ಲೋಕದ ಸಾಲುದೀಪಗಳಲ್ಲಿ ಒಬ್ಬರಾದ, ಅನುಭಾವ ಸಾಹಿತ್ಯದ ರತ್ನಮಂಗಲ ಕಲಶವೆನಿಸಿರುವ, ಬಸವತತ್ವಾರಾಧನಾ ಕಮ್ಮಟದ ಇಲ್ಲಿ-ಅಲ್ಲಿ ಸಲ್ಲುವ ಶರಣ ನಾಣ್ಯ ಡಾ. ಗುರುಲಿಂಗ ಕಾಪಸೆಯವರು ದಿನಾಂಕ : ೨-೪-೧೯೨೮ರಂದು ವಿಜಾಪುರ ಜಿಲ್ಲೆ ಇಂಡಿ ತಾಲ್ಲೂಕು ಹಿರೇಲೋಣಿಯಲ್ಲಿ ಶ್ರೀ ಶಂಕರಪ್ಪ ಮತ್ತು ಶ್ರೀಮತಿ ವೀರವ್ವನವರ ಸುಪುತ್ರರಾಗಿ ಹುಟ್ಟಿದರು. ಪ್ರಾಥಮಿಕ ವಿದ್ಯಾಭ್ಯಾಸವನ್ನು ಹಿರೇಲೋಣಿ, ಚಡಚಣಗಳಲ್ಲಿ ಮುಗಿಸಿ ಬರಡೋಲದಲ್ಲಿ ೧೯೪೫ರಲ್ಲಿ ಮುಲ್ಕಿಪರೀಕ್ಷೆಯಲ್ಲಿ ಉತ್ತೀರ್ಣರಾಗಿ, ೧೯೫೨-೧೯೫೪ರಲ್ಲಿ ಶಿಕ್ಷಕ ತರಬೇತಿ ಮುಗಿಸಿ, ೧೯೫೫ರಲ್ಲಿ ಹಿಂದಿ ಎಸ್.ಎಸ್.ಎಲ್.ಸಿ. ೧೯೬೦ರಲ್ಲಿ ಇಂಗ್ಲೀಷ್ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ತೇರ್ಗಡೆಯಾದರು. ೧೯೬೪ರಲ್ಲಿ ಬಿ.ಎ. ಪದವಿಯನ್ನೂ, ೧೯೬೬ರಲ್ಲಿ ಎಂ.ಎ. ಪದವಿಯನ್ನೂ ಸುವರ್ಣಪದಕದೊಡನೆ ಪಡೆದು ೧೯೬೫ರಲ್ಲಿ ಡಿಪ್ ಇನ್ ಎಪಿಗ್ರಾಫಿ ೧೯೭೬ರಲ್ಲಿ ಪಿಎಚ್.ಡಿ. ಪದವಿಯನ್ನು ಕರ್ನಾಟಕ ವಿಶ್ವವಿದ್ಯಾಲಯದಿಂದ ಪಡೆದರು.

೧೯೪೫ರಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕರಾಗಿ ವೃತ್ತಿ ಜೀವನವನ್ನು ಆರಂಭಿಸಿದ ಡಾ. ಕಾಪಸೆಯವರು ಕಾಲೇಜು ಅಧ್ಯಾಪಕರಾಗಿ, ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾಗಿ, ಪ್ರಾಚಾರ್ಯರಾಗಿ ಸೇವೆಸಲ್ಲಿಸಿದವರಾಗಿದ್ದಾರೆ. ಇದೀಗ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

ಡಾ. ಗುರುಲಿಂಗರದು "ಒಂದು ಅಪೂರ್ವ ವ್ಯಕ್ತಿತ್ವ ವಿಮರ್ಶೆ, ಜೀವನ ಚರಿತ್ರೆ, ಪ್ರವಾಸ ಕಥನ, ಸಂಶೋಧನೆ, ಸಂಪಾದನೆ, ಶಿಶುಸಾಹಿತ್ಯ ಮೊದಲಾದ ಪ್ರಕಾರಗಳಲ್ಲಿ ವಿಶೇಷ ಕೃಷಿಗೈದಿರುವ ಕಾಪಸೆಯವರು ಭಾಷಾ ಬಾಂಧವ್ಯದ ಕಾರ್ಯಚಟುವಟಿಕೆಗಳಲ್ಲಿಯೂ ಅತ್ಯಂತ ಕ್ರಿಯಾಶೀಲರಾಗಿ ತಮ್ಮನ್ನು ತೊಡಗಿಸಿಕೊಂಡವರು. ಶ್ರೀಮಾತಾರವಿಂದರ ಸಾಹಿತ್ಯದ ಅಭ್ಯಾಸದೊಂದಿಗೆ ವಿವಿಧ ಆಧ್ಯಾತ್ಮಿಕ ಚಿಂತನೆಗಳನ್ನು ಮೈಗೂಡಿಸಿಕೊಂಡ ಸರಳ-ಸಜ್ಜನಿಕೆಯ ಬದುಕು ಅವರದು. ಹಲಸಂಗಿ ಗೆಳೆಯರ ಗುಂಪಿನ ವಾರಸುದಾರರಾದ ಅವರು ಅನುಭಾವಿ ಕವಿ ಮಧುರ ಚೆನ್ನರ ಸಮಗ್ರ ಸಾಹಿತ್ಯವನ್ನು ಸಂಪಾದಿಸಿಕೊಟ್ಟು ಕನ್ನಡಿಗರ ಕೃತಜ್ಞತೆಗೆ ಪಾತ್ರರಾಗಿದ್ದಾರೆ." ಕನ್ನಡ ಸಾರಸ್ವತ ಲೋಕದಲ್ಲಿ ಸದ್ದುಗದ್ದಲ ಮಾಡದೆ ನಡೆದು ಬಂದ ವಿನಮ್ರಶೀಲರು. ಡಾ. ಕಾಪಸೆಯವರದು ಸತತ ಹೋರಾಟದ ಸ್ವಪ್ರಯತ್ನದ ಬದುಕು "ಕಹಿ ಇಲ್ಲದ ನುಡಿ, ಕಪ್ಪಿಲ್ಲದ ನಡೆ, ವಿಷಯಗಳಿಗೆಳಸದ ನೋಟ. ಭಾವದಲಿ ಸೌಮ್ಯತೆ, ಬುದ್ಧಿಯಲಿ ಬೆಳಕು. ತತ್ವ ಚಿಂತನದ ಒಲವು, ಅನುಭಾವಕ್ಕೆ ಮಾರುಹೋದಮನ, ನಿರಂತರ ಅಧ್ಯಯನ, ಅಭಿವ್ಯಕ್ತಿ. ಈ ಅಭಿವ್ಯಕ್ತಿಯಲ್ಲಿ ನಿಖರತೆ, ಸ್ಪಷ್ಟತೆ, ತುರೀಯದೆತ್ತರದ ಪಾರಮಾರ್ಥಿಕ ಹೊಳಹನ್ನು ಶಬ್ದ ಕಲಶಗಳಲ್ಲಿ ತುಂಬಿಡಬಲ್ಲ ಅಪರೂಪದ ಕಲೆ. ಕೇಳುಗರ ಮನವ ಸೂರೆಗೊಳ್ಳುವ ವಾಗ್ವಿಲಾಸ. ಕೈಯಲಿರಿಸಿ ಕಾಣಲಾಗದ ಕವಿದರ್ಶನಗಳ ಗುಣಗ್ರಾಹಿ ವಿಮರ್ಶಿಸುವ ಸಹೃದಯತೆ, ಇವು ಅವರ ವ್ಯಕ್ತಿತ್ವದ ಅಲಂಕರಣಗಳು".

ಡಾ. ಕಾಪಸೆಯವರು ನೆಲದಮಗನಾಗಿ ಅರಳಿದವರು. ವಿದ್ಯಾರ್ಥಿ ಜೀವನದಲ್ಲಿ ಕೃಷಿ ಕಾಯಕ ಮಾಡುತ್ತಾ, ದನಗಾಹಿಯಾಗಿ ಕಾರ್ಯನಿರ್ವಹಿಸುತ್ತ ಮಣ್ಣಿನೊಂದಿಗೆ, ದನಕರುಗಳೊಂದಿಗೆ ಪ್ರಕೃತಿಯೊಂದಿಗೆ ಮಾತಿಗಿಳಿದರು. ಅವರು ವೃತ್ತಿಜೀವನದಲ್ಲಿ ಹಲವು ಹುದ್ದೆಗಳನ್ನು ಅಲಂಕರಿಸಿದವರಾದರೂ ಅವರ ಬಾಲ್ಯದ ಬದುಕಿನ ಕೃಷಿತನ ಅವರ ಮುಖದಲ್ಲಿ ಅಚ್ಚೊತ್ತಿನಿಂತದ್ದನ್ನು ಕಾಣಬಹುದು. ಇಂದಿಗೂ ಅವರ ಮುಖದಲ್ಲಿ ಒಬ್ಬ ರೈತನನ್ನು, ಕಣ್ಣುಗಳಲ್ಲಿ ಒಬ್ಬ ಸಂತನನ್ನು ಹಾಗೂ ಮಾತಿನಲ್ಲಿ ಒಬ್ಬ ವಿದ್ವಾಂಸನನ್ನು ಕಾಣಬಹುದು.

ಅಂತರಂಗರತ್ನ, ಅರವಿಂದಪ್ರಜ್ಞೆಯ ಮರಿಯಾನೆ, ಸಖ್ಯಯೋಗದ ಸಿದ್ಧ, ಆಪದ್ಬಾಂಧವ, ಒಂದು ವಿಸ್ಮಯ, ಹಿರೇಮನಸ್ಕಾ, ವೀರಶೈವಾಚಾರ ಶಿವಯೋಗಸಾಧಕ, ಅಹಂ ಇರದ ಸುಗಂಧ, ಸೌಜನ್ಯಶೀಲ, ಅಪರೂಪ ವ್ಯಕ್ತಿ, ಹುಟ್ಟು ಗುರು, ಸಾಹಿತ್ಯ ಸರಸ್ವತಿಯ ಕಂಠಾಭರಣದ ಮಣಿರತ್ನ, ಸೋಲನ್ನು ಗೆದ್ದ ತಂದೆ, ನಗೆ ಮೊಗದ ಮಂದಾರ-ಮುಂತಾಗಿ ಕನ್ನಡನಾಡಿನ ಸಾಹಿತ್ಯಲೋಕಕ್ಕೆ ಕಂಡಿರುವ ಡಾ. ಕಾಪಸೆಯವರದು ಊರ್ಧ್ವಮುಖಿ ವರ್ತಮಾನಮುಖಿಯಾದ ಬದುಕು. ಅದು ಆತ್ಮಕೇಂದ್ರೀತವಾದರೂ ಜಂಗಮಶೀಲವಾಗಿರುವುದು ಮತ್ತೊಂದು ವೈಶಿಷ್ಟ್ಯ.

ಡಾ. ಗುರುಲಿಂಗ ಕಾಪಸೆಯವರ ಸಾಹಿತ್ಯ ದಾಸೋಹ ಗಣನೀಯವಾದುದು. ಮಧುರ ಚೆನ್ನರ ಜೀವನ ಹಾಗೂ ಕೃತಿಗಳ





ಸಮೀಕ್ಷೆ, ಮಧುರ ಚೆನ್ನ ಸಾಹಿತ್ಯ ಸಂಬಂಧ, ಅಕ್ಕಮಹಾದೇವಿ, ಬಸವೇಶ್ವರ, ಶ್ರೀ ಅರವಿಂದರು, ಹಲಸಂಗಿ ಗೆಳೆಯರು, ಕವಿ ರವೀಂದ್ರರು, ಶಿ.ಶಿ. ಬಸವನಾಳ – ಸ್ವರಚಿತ ಕೃತಿಗಳು. ಪಾರಮಾರ್ಥ ಗೀತಾ ಪ್ರವಚನ, ಅರವಿಂದರ ಪರಿಮಳ, ಹರಿಹರನ ಐದು ರಗಳೆಗಳು, ಚೆಂಬೆಳಕು, ಕನ್ನಡ ಮರಾಠಿ ಸಾಹಿತ್ಯ ಬಾಂಧವ್ಯ, ಭವ್ಯಮಾನವ ಕಾವ್ಯದರ್ಶನ, ಚಾಮರಸ, ಜ್ಞಾನಸಿಂಧು ಸಂಪಾದಿತ ಕೃತಿಗಳು. ಇದೇ ನಿಜವಾದ ಮೂರ್ತಿ ಪೂಜೆ ಮತ್ತು ಇದೇ ನಿಜವಾದ ಧರ್ಮ, ಬಸವೇಶ್ವರಾಂಚಿ ವಚನಗಳು ಅನುವಾದಿತ ಕೃತಿಗಳು. ಹಚ್ಚೇವು ಕನ್ನಡದ ದೀಪ, ಶರಣ ಕಿರಣ, ಧಾರಾನಗರಿ, ಅಖಿಲ ಭಾರತ ಪತ್ರಿಕೆಗಳು, ವಿಶೇಷ ಸಂಚಿಕೆಗಳಲ್ಲಿ ೨೦೦ಕ್ಕೂ ಹೆಚ್ಚು ಲೇಖನಗಳು ಪ್ರಕಟವಾಗಿವೆ.

ಡಾ. ಕಾಪಸೆಯವರ ಸಾಹಿತ್ಯ ಕೃಷಿಗೆ ಸಂದ ಪ್ರಶಸ್ತಿ ಗೌರವಗಳು ಹಲವಾರು. ಅವುಗಳಲ್ಲಿ ಮುಂಬಯಿ ಕರ್ನಾಟಕ ಸಂಘದ ವರದರಾಜ ಪ್ರಶಸ್ತಿ, ಕರ್ನಾಟಕ ನಾಟಕ ಆಕಾಡೆಮಿಯ ಫೆಲೋಶಿಪ್, ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ಆನಂದ ಕಂದ ಪ್ರಶಸ್ತಿಗಳು, ವಿಜಾಪುರ ಜಿಲ್ಲಾ ೬ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯ ಗೌರವಗಳು ಶ್ರೀಯುತರನ್ನು ಸಿಂಗರಿಸಿವೆ.

ಡಾ. ಕಾಪಸೆಯವರ ವ್ಯಕ್ತಿತ್ವ ಪ್ರಕಾಶಕ್ಕೆ ನಂದಾದೀಪವಾಗಿ ಬೆಳಕು ಚೆಲ್ಲುತ್ತ ಹೆಜ್ಜೆ ಹಾಕಿದವರು ಧರ್ಮಪತ್ನಿ ಕಾಶಿಬಾಯಿ. ಸಂಸಾರವನ್ನು ಒಪ್ಪವಿಟ್ಟ ಸದ್ಗೃಹಿಣಿ. ಮಕ್ಕಳಾದ ಶ್ರೀ ಚಂದ್ರಶೇಖರ, ಶಶಿಕಲಾ, ಉಷಾ, ರವಿಯವರನ್ನು ಜೋಪಾನಮಾಡಿ ವಿದ್ಯಾಬುದ್ಧಿ ಸನ್ನಡತೆಗಳನ್ನು ಕಲಿಸಿ ಕಾಪಸೆಯವರ ಸಾರಸ್ವತ ಕಮ್ಮಟದಲ್ಲಿ ಅರಳಲು ಅನುವು ಮಾಡಿಕೊಟ್ಟ ಸಾಧ್ವಿ ಶರಣೆ.

ಶ್ರೀ ಸಿದ್ಧಗಂಗಾ ಮಠದೊಡನೆ ಆಧ್ಯಾತ್ಮಿಕ ಬಾಂಧವ್ಯ ಬೆಸುಗೆಯನ್ನು ಬೆಳೆಸಿಕೊಂಡು ಬಂದಿರುವ ಡಾ. ಗುರುಲಿಂಗ ಕಾಪಸೆಯವರನ್ನು "ತುಂಬಿದ ಗಂಧದ ಕೊಡ" ಎಂದು ಗೌರವಿಸಿ ಸನ್ಮಾನಿಸಲಾಯಿತು.

☆

# ಬಾಳ್ಳುವಿನ ಬೆಳ್ಳಿಚುಕ್ಕಿ

## ಶ್ರೀ ಬಿ.ಎಸ್. ದೇವರಾಜ್



ಕಾಫಿ ಏಲಕ್ಕಿ ತೋಟಗಳ ನಡುವೆ ಬಾಳ್ಳುಪೇಟೆ. ಹಾಸನ-ಸಕಲೇಶಪುರಗಳ ಮಧ್ಯೆ ನಿಸರ್ಗ ಸೌಂದರ್ಯಕ್ಕೆ ಹೊಂದಿಕೊಂಡಿರುವ ಕೆಲವೇ ಕೆಲವು ಮನೆಗಳು. ಅವುಗಳಲ್ಲೊಂದು ಶ್ರೀ ಸಿದ್ಧಣ್ಣಯ್ಯನವರದ್ದು. ಸತಿ ಶ್ರೀಮತಿ ನಂಜಮ್ಮನವರೊಡನೆ ತುಂಬು ಜೀವನ ನಡೆಸಿದ ಸಂಭಾವಿತ ಗುರುಲಿಂಗ ಜಂಗಮ ಪ್ರೇಮಿಗಳಾಗಿದ್ದರು. ಶ್ರೀ ಸಿದ್ಧಣ್ಣಯ್ಯನವರು ಶ್ರೀಮಂತರು ಹಣದಲ್ಲಿ, ಅದಕ್ಕೂ ಮಿಗಿಲಾಗಿ ಸದ್ಗುಣಗಳಲ್ಲಿ. ಅವರ ದಾಂಪತ್ಯದಲ್ಲಿ ಅರಳಿದವರು ಶ್ರೀ ಬಿ.ಎಸ್. ದೇವರಾಜ್. ದಿನಾಂಕ ೨೬-೧೨-೧೯೫೦ರಂದು ಶ್ರೀ ದೇವರಾಜ್ ಜನಿಸಿ ಸಿದ್ದಣ್ಣಯ್ಯನವರ ಮನೆಯ ಸಂತೋಷದ ದೀಪವಾದರು. ತಾಯಿಯ ಸದ್ಗುಣ, ತಂದೆಯ ಸದ್ವಿದ್ಯೆಗಳನ್ನೆಲ್ಲಾ ಮೈಗೂಡಿಸಿಕೊಂಡು ಬೆಳೆದರು. ಮಾತು ಮಿತವಾದರೂ ಹಿತವಾದುದನ್ನೇ ಆಡುತ್ತ ಮುನ್ನಡೆದರು. ಮನೆಗೆ, ಬಂಧು ಬಳಗಕ್ಕೆ, ಗ್ರಾಮಸ್ಥರಿಗೆ ಕಣ್ಣಾಗಿನಿಂತರು. ಶ್ರೀಮತಿ ವೇದವತಿಯನ್ನು ಕೈಹಿಡಿದು ಸತಿಪತಿಗಳೊಂದಾಗಿ ಹೆಜ್ಜೆ ಹಾಕಿದರು. ಸಿದ್ದಣ್ಣಯ್ಯನವರ ಕನಸಿನಾಕಾಂಕ್ಷೆಗಳನ್ನು ನನಸಾಗಿಸಿದರು. 'ದಿವಾನ್ ಎಸ್ಟೇಟ್' – ಕಾಫಿ ತೋಟವನ್ನು ನೋಡಿದವರು ಅಚ್ಚರಿಪಡುವಂತೆ ಬೆಳೆಸಿದರು. ಯೋಗ್ಯ ತಂದೆಗೆ ಸುಯೋಗ್ಯ ಮಗನೆನಿಸಿಕೊಂಡರು. ತಂದೆಗೆ ತಕ್ಕ ಮಗನಾದರು.

ಶ್ರೀ ದೇವರಾಜ್ ಅವರು ಕೇವಲ ಕುಟುಂಬಕ್ಕೆ ಸೀಮಿತರಾಗಲಿಲ್ಲ. ಸಾಮಾಜಿಕ ಕ್ಷೇತ್ರಕ್ಕೂ ನಡೆದು ಬಂದರು. ಸಂಘಸಂಸ್ಥೆಗಳಲ್ಲಿ ಸೇವೆ ಸಲ್ಲಿಸುತ್ತ ವ್ಯಕ್ತಿತ್ವ ವಿಕಾಸ ಮಾಡಿಕೊಂಡರು. ೧೯೮೧-೮೨ರಲ್ಲಿ ಹಾಸನ ಜಿಲ್ಲೆಯ ಕಾಫಿ ಪ್ಲಾಂಟರ್ಸ್ ಅಸೋಸಿಯೇಷನ್ನಿನ ಅಧ್ಯಕ್ಷರಾಗಿ ಸುತ್ತ್ಯರ್ಹ ಸೇವೆ ಸಲ್ಲಿಸಿದ ಕೀರ್ತಿ ಅವರಿಗಿದೆ. ಬಾಳ್ಳುಪೇಟೆಯ ವಿನಾಯಕ ವಿದ್ಯಾಸಂಸ್ಥೆಯ ಅಧ್ಯಕ್ಷರಾಗಿ ಸ್ಮರಣೀಯ ರೀತಿಯಲ್ಲಿ ಸಂಸ್ಥೆಯ ಅಭಿವೃದ್ಧಿಗೆ ಕಾರಣರಾಗಿದ್ದಾರೆ. ಪ್ರಸ್ತುತ ಬೇಲೂರು ತಾಲ್ಲೂಕಿನ ಹಳೇಬೀಡು ಗ್ರಾಮದಲ್ಲಿರುವ ಶ್ರೀ ಪುಷ್ಪಗಿರಿ ಮಲ್ಲಿಕಾರ್ಜುನ ದೇವಾಲಯ ವಿಶ್ವಸ್ಥ ಮಂಡಳಿಯ ಅಧ್ಯಕ್ಷರಾಗಿದ್ದಾರೆ. ಬೆಂಗಳೂರಿನ ಸರ್ಪಭೂಷಣ ಮಠದ ವಿಶ್ವಸ್ಥ ಸಮಿತಿಯ ಸದಸ್ಯರಾಗಿದ್ದಾರೆ. ಹಾಸನದ ಪ್ಲಾಂಟರ್ಸ್ ಕಾಫಿ ಕ್ಯೂರಿಂಗ್ ವರ್ಕ್ಸ್‌ನ ನಿರ್ದೇಶಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಬೆಂಗಳೂರಿನ ರಿಪಬ್ಲಿಕ್ ನರ್ಸಿಂಗ್

ಹೋಂನ ವ್ಯವಸ್ಥಾಪಕ ನಿರ್ದೇಶಕರಾಗಿ ಸಂಸ್ಥೆಯ ಅಭಿವೃದ್ಧಿಗೆ ಕಾರಣರಾಗಿದ್ದಾರೆ.

ಶ್ರೀ ದೇವರಾಜ್ ಅವರದು ಸೌಮ್ಯಸ್ವಭಾವ, ಮಿತಭಾಷಿಗಳು. ಕಾಫಿಯ ಮಧುರ ಪರಿಮಳದಂತೆ ಅವರ ಸ್ನೇಹ ಸಾಹಚರ್ಯ. ಶ್ರೀ ಸಿದ್ಧಗಂಗಾ ಶ್ರೀಗಳೆಂದರೆ ಅವರಿಗೆ ನಡೆದಾಡುವ ದೇವರೆಂಬ ಭಕ್ತಿ ಭಾವನೆ. ತಂದೆ ಸಿದ್ದಣ್ಣಯ್ಯನವರು ನಡೆದು-ನುಡಿದು ತೋರಿಸಿದ ಕುಟುಂಬ ಧರ್ಮದ ವಾರಸುದಾರರು. ಶ್ರೀಯುತರ ಬದುಕಿಗೆ, ಕೀರ್ತಿಗೆ, ಗೌರವಕ್ಕೆ ಹೂವು ಮುಡಿಸಿದವರು ಧರ್ಮಪತ್ನಿ ಶ್ರೀಮತಿ ವೇದವತಿಯವರು. ಗೃಹಗೌರಿ ಅವರು. ಶರಣ ಸಂಸ್ಕೃತಿಯ ಸಿರಿದೀಪವೆನ್ನಬೇಕು ಅವರನ್ನು. ಶ್ರೀ ಬಿ.ಡಿ. ಬಸವಣ್ಣ, ಡಾ. ಬಿ.ಡಿ. ಶಶಿಧರ್ ಮತ್ತು ಶ್ರೀ ಪ್ರಭುಶಂಕರರಂಥ ಮಕ್ಕಳನ್ನು ಪಡೆದ ಧನ್ಯ ದಂಪತಿಗಳು. ಬಾಳ್ಳುವಿನ ಬಾಳಿನಲ್ಲಿ ಕಾಫಿ ಹೂವಿನಂತೆ ಕಂಗೊಳಿಸಿ, ಘಮ ಘಮಿಸುತ್ತಿರುವ ಸದಾಚಾರ ಸಂಪನ್ನರು. ಬೆಂಗಳೂರಿನಲ್ಲಿದ್ದರೂ 'ಮಳೆಬಿಟ್ಟರೂ ಮರದ ಹನಿಬಿಡದು' ಎಂಬಂತೆ ಮನದತುಂಬಾ ಬಾಳ್ಳುವಿನ ನೆನಪಿನಲ್ಲಿ ಬಾಳು ಸಾಗಿಸಿರುವವರು.

ಸುಸಂಸ್ಕೃತ ಮನೆತನದ ಬಾಳ್ಳುವಿನ ಶ್ರೀ ಬಿ.ಎಸ್. ದೇವರಾಜ್ ಅವರಿಗೂ ಶ್ರೀ ಸಿದ್ಧಗಂಗಾಮಠಕ್ಕೂ ಅನ್ಯೋನ್ಯ ಭಕ್ತಿಬಾಂಧವ್ಯ. ಪಿತ್ರಾರ್ಜಿತ ಆಸ್ತಿಯೆಂಬಂತೆ ಅದನ್ನು ರಕ್ಷಿಸಿಕೊಂಡು ಬಂದಿರುವ ಶ್ರೀಯುತರನ್ನು ''ಬಾಳ್ಳುವಿನ ಬೆಳ್ಳಿ ಚುಕ್ಕಿ'' ಎಂದು ಗೌರವಿಸಿ, ಸನ್ಮಾನಿಸಲಾಯಿತು.

☆

## ಧರ್ಮಕಾರ್ಯ ನಿರತ
## ಯಜಮಾನ್ ಶ್ರೀಕಂಠಪ್ಪ



ಗಂಧದ ಕಡ್ಡಿ ಉರಿದು ಸುತ್ತಮುತ್ತ ಸುವಾಸನೆಯನ್ನು, ಮಧುರ ಕಂಪನ್ನು ಹರಡುತ್ತದೆ. ಸುವಾಸನೆಯಿರುವೆಡೆಯಲ್ಲಿ ಶಿವನಿರುತ್ತಾನೆ ಎನ್ನುತ್ತಾರೆ ಪ್ರಾಜ್ಞರು. ಅಣ್ಣ ಬಸವಣ್ಣನವರು ತಮ್ಮನ್ನು 'ಲಿಂಗವ್ಯಸನಿ, ಜಂಗಮ ಪ್ರಾಣಿ' ಎಂದೆನಿಸಯ್ಯಾ ಎಂದಿದ್ದಾರೆ. ಲಿಂಗ ಧರ್ಮದ ಸಂಕೇತ. ದಯೆಯ ಪ್ರತೀಕ, ಮಾನವೀಯತೆಯ ಮಾಂಗಲ್ಯ. ಸಂಸ್ಕರಿಸಿದಂತೆ ಬುದ್ಧಿ, ಸಾಧನೆಯಂತೆ ಸಿದ್ಧಿ, ಬಿತ್ತಿದಂತೆ ಬೆಳೆ, ಬಯಸಿದಂತೆ ಬಾಳು. ತಂದೆಯಂತೆ ಮಗ ಎಂಬಂತೆ ಬಾಳುತ್ತಿರುವ ಶ್ರೀ ಶ್ರೀಕಂಠಪ್ಪನವರದು 'ಯಜಮಾನ್' ಮನೆತನದ ಸಂಪತ್ತಿಗೆ, ಸದ್ಗುಣಗಳಿಗೆ, ಸದಾಚಾರಕ್ಕೆ, ಗುರುಲಿಂಗ ಜಂಗಮ ಸೇವೆಗೆ ಯಜಮಾನನಾಗಿ ಬಂದ ಶ್ರೀ ಕೆಂಚಪ್ಪ ಮತ್ತು ಶ್ರೀಮತಿ ಗೌರಮ್ಮನವರ ಸುಪುತ್ರರಾಗಿ ಜನಿಸಿದರು. ಶ್ರೀಕಂಠಪ್ಪನವರು ದಿನಾಂಕ ೨೫-೩-೧೯೩೭ರಲ್ಲಿ ಕೋಲಾರದಲ್ಲಿ ಶ್ರೀಮತಿ ಪುಷ್ಪಾಂಬರನ್ನು ಧರ್ಮಪತ್ನಿಯಾಗಿ ಪಡೆದು ಮೂರು ಹೆಣ್ಣು ಮಕ್ಕಳು, ಒಬ್ಬ ಮಗನನ್ನು ಹೊಂದಿರುವ ಸದ್ಗೃಹಸ್ಥರು.

ಶ್ರೀಯುತರು ೧೯೫೦ರವರೆಗೆ ಕಾಲೇಜು ಶಿಕ್ಷಣನ್ನು ಪಡೆದು ಅನಂತರ ಮನೆತನದ ವೃತ್ತಿಯಾದ ಸುಗಂಧ ದ್ರವ್ಯ ಮತ್ತು ಅಗರಬತ್ತಿ ವ್ಯಾಪಾರದಲ್ಲಿ ತಂದೆಯವರೊಡನೆ ತೊಡಗಿ ಪ್ರಸಿದ್ಧಿಯಾದರು. ೧೯೬೦ರ ನಂತರ ವ್ಯಾಪಾರಕ್ಷೇತ್ರವನ್ನು ವಿಸ್ತರಿಸುತ್ತಾ ವಿವಿಧ ವಾಣಿಜ್ಯ ವ್ಯವಹಾರಗಳಲ್ಲಿ ಮುನ್ನಡೆದರು. ಸುಗಂಧ ದ್ರವ್ಯದ ವ್ಯಾಪಾರ ಸುವ್ಯಸನಿಗಳನ್ನಾಗಿಸಿತು. ಸಮಾಜಸೇವೆಗೆ ಪ್ರೇರೇಪಿಸಿತು. ವ್ಯಕ್ತಿತ್ವದ ವಿಕಾಸಕ್ಕೆ ಅವಕಾಶ ಕಲ್ಪಿಸಿತು. ಅನೇಕ ಸಂಘ ಸಂಸ್ಥೆಗಳಲ್ಲಿ, ಮಠಮಾನ್ಯಗಳಲ್ಲಿ ಧರ್ಮಕಾರ್ಯಗಳಲ್ಲಿ ತೊಡಗಿಸಿತು. ತತ್ಫಲವಾಗಿ ಶ್ರೀಕಂಠಪ್ಪನವರು – ಬೆಂಗಳೂರು ಶ್ರೀ ಮಂಹತರ ಮಠದ ಟ್ರಸ್ಟ್, ಬಾಳೆಹೊನ್ನೂರು ಶ್ರೀ ರಂಭಾಪುರೀಶ್ವರ ಕಟ್ಟಡ ನಿಧಿ ಸಮಿತಿ, ಬೆಂಗಳೂರು ಶ್ರೀ ಮಹಂತರ ಮಠದ ಶ್ರೀ ವಿರೂಪಾಕ್ಷೇಶ್ವರ ಸಮಿತಿ, ಬೆಂಗಳೂರು ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯ ಉಚಿತ ವಿದ್ಯಾರ್ಥಿನಿಲಯದ ವೇದ ಸಂಸ್ಕೃತ ಶಿಕ್ಷಣದ ವಿಭಾಗ ಇವುಗಳ ಅಧ್ಯಕ್ಷರಾಗಿ, ಬೆಂಗಳೂರು ದೇಶದ ಅರಳೇಪೇಟೆ ದೇವಸ್ಥಾನಗಳ ಟ್ರಸ್ಟಿಯ ಉಪಾಧ್ಯಕ್ಷರಾಗಿ, ಶ್ರೀ ಜಗದ್ಗುರು ರೇಣುಕಾಚಾರ್ಯ ವಿದ್ಯಾಸಂಸ್ಥೆಯ, ಬೆಂಗಳೂರು ವಿಶ್ವವೀರಶೈವ ಪರಿಷತ್, ನಂದಿಯ ಶ್ರೀ ನಂದಿವೀರಭದ್ರ ಸ್ವಾಮಿ ದೇವಸ್ಥಾನದ, ಧರ್ಮಪ್ರಕಾಶ ಶ್ರೀ ಎನ್. ರುದ್ರಯ್ಯ ಕಲ್ಯಾಣಮಂಟಪದ, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಬೆಂಗಳೂರಿನ ನಗರ ಘಟಕದ ದಿಬ್ಬೂರು ವೀರಪ್ಪ ನಂಜಪ್ಪ ಎಂಡೋಮೆಂಟ್ ಟ್ರಸ್ಟಿನ – ಕೋಶಾಧ್ಯಕ್ಷರಾಗಿ, ರಾವ್ ಬಹಾದ್ದೂರ್ ಧರ್ಮಪ್ರವರ್ತ ಗುಬ್ಬಿ ತೋಟದಪ್ಪನವರ ಧರ್ಮಸಂಸ್ಥೆಯ ಕಾರ್ಯದರ್ಶಿಗಳಾಗಿ, ಬಾಳೆಹೊನ್ನೂರಿನ ಶ್ರೀ ಜಗದ್ಗುರು ರೇಣುಕಾಚಾರ್ಯ ತಾಂತ್ರಿಕ ತರಬೇತಿ ಕೇಂದ್ರದ ಕಾರ್ಯನಿರ್ವಾಹಕರಾಗಿ, ಬೆಂಗಳೂರು ನಗರ ಜಿಲ್ಲೆ ಕನ್ನಡ ಸಾಹಿತ್ಯ ಪರಿಷತ್ತಿನ ಕೋಶಾಧ್ಯಕ್ಷರಾಗಿ ಶ್ಲಾಘನೀಯ ಸೇವೆ ಸಲ್ಲಿಸುವಂತಾ ದುದು ಸಮಾಜದ ಪುಣ್ಯ. ಬೆಂಗಳೂರು ಮಲ್ಲೇಶ್ವರಂ ಬಡಾವಣೆಯ ಶ್ರೀ ಈಶ್ವರ ಸೇವಾ ಮಂಡಳಿಯ ನಿರ್ದೇಶಕರಾಗಿ ದುಡಿದಿದ್ದಾರೆ.





ಸಾಹಿತ್ಯಾಭಿಮಾನಿಗಳಾದ ಶ್ರೀಕಂಠಪ್ಪನವರು ನಿಡು ಮಾಮಿಡಿ ಜಗದ್ಗುರು ಡಾ. ಜ.ಚ.ನಿಯವರು ನಡೆಸಿದ 'ಸಿದ್ಧಾಂತ ಶಿಖಾಮಣಿ'ಯ ವಿಚಾರ ಸಂಕಿರಣವನ್ನು ಯಶಸ್ವಿಯಾಗಿ ನಿರ್ವಹಿಸಿದ ಕಾರ್ಯದಕ್ಷರು. ಅಂತೆಯೆ ವೀರಶೈವ ಅನುಸಂಧಾನ ಸಂಸ್ಥಾನದ ಸಕ್ರಿಯ ಸದಸ್ಯರಾಗಿ ಅನೇಕ ಗ್ರಂಥ ಪ್ರಕಟಣಾ ದಾಸೋಹ ಕೈಂಕರ್ಯಗೈದ ಸಾಹಿತ್ಯಪ್ರೇಮಿಗಳಾಗಿದ್ದಾರೆ.

''ಆನು ಬೆವಹಾರವ ಮಾಡುವೆನಯ್ಯ ಲಿಂಗಾರ್ಚನೆಗೆಂದು'' ಎಂಬ ವಾಣಿಯಂತೆ ಶ್ರೀಕಂಠಪ್ಪನವರು ವಿವಿಧ ವ್ಯಾಪಾರ ವಾಣಿಜ್ಯ ವ್ಯವಹಾರಗಳಿಂದ ಗಳಿಸಿದ ಸಂಪತ್ತಿನಲ್ಲಿ ಸಮಾಜದ ಧರ್ಮಕಾರ್ಯಗಳಿಗೆ ಉದಾರವಾಗಿ ಧನ ಸಹಾಯ ಮಾಡಿದ ಧರ್ಮವ್ಯಸನಿಗಳಾಗಿದ್ದಾರೆ. ನಂಜನಗೂಡು ಶ್ರೀಕಂಠೇಶ್ವರ ಸ್ವಾಮಿ ದೇವಸ್ಥಾನದ ಶ್ರೀ ಗಿರಿಜಾ ಕಲ್ಯಾಣ ಮಂಟಪದ ಯಾತ್ರಿ ನಿವಾಸಕ್ಕೆ, ಮಲೆಯ ಮಹದೇಶ್ವರ ಯಾತ್ರಿಕರ ನಿವಾಸಕ್ಕೆ, ಮುಡುಕುತೊರೆ ಶ್ರೀ ತೋಪಿನ ಮಠದಲ್ಲಿನ ಸಮುದಾಯ ಭವನ ನಿರ್ಮಾಣಕ್ಕೆ, ಬಾಳೆಹೊನ್ನೂರಿನ ಶ್ರೀ ರಂಭಾಪುರಿ ಪೀಠದಲ್ಲಿ ಸಾಮೂಹಿಕ ಸಭಾಭವನಕ್ಕೆ ಮತ್ತು ಯಾತ್ರಿಕರ ವಸತಿ ಮಂದಿರಕ್ಕೆ, ಶ್ರೀ ಶೈಲದಲ್ಲಿ ಜಗದ್ಗುರು ಪಂಡಿತಾರಾಧ್ಯ ಪೀಠದ ಜೀರ್ಣೋದ್ಧಾರ, ನಂದಿಯಲ್ಲಿನ ಧರ್ಮಪ್ರಕಾಶ ಎನ್. ರುದ್ರಯ್ಯನವರ ಕಲ್ಯಾಣಮಂಟಪದ ಭೋಜನ ಶಾಲೆಯ ನಿರ್ಮಾಣಕ್ಕೆ, ಆನೇಕಲ್ಲಿನ ರಾಜಾಪುರ ವೀರಸಂಸ್ಥಾನಮಠದ ಸಭಾಭವನಕ್ಕೆ ತಲಕಾಡಿನ ನಿತ್ಯ ಅನ್ನ ದಾಸೋಹ ಸಮಿತಿಯ ಅಭಿವೃದ್ಧಿಗೆ, ಶ್ರೀ ಜಗದ್ಗುರು ರೇಣುಕಾಚಾರ್ಯ ವಿದ್ಯಾಸಂಸ್ಥೆಯಲ್ಲಿ ಬಡ ವಿದ್ಯಾರ್ಥಿಗಳಿಗಾಗಿ ವಿದ್ಯಾರ್ಥಿವೇತನ ನೀಡಲು ಸ್ಥಾಪಿತ ನಿಧಿಗೆ ಕೊಡುಗೈಯಿಂದ ಹಣನೀಡಿ ಸಮಾಜದ ಏಳಿಗೆಗೆ ಶ್ರಮಿಸಿ ವಿನಮ್ರರಾಗಿದ್ದಾರೆ.

ಶ್ರೀಯುತರ ಧರ್ಮ ಕಾರ್ಯಪ್ರೇಮವನ್ನು ಗಮನಿಸಿದ ಸಂಘ ಸಂಸ್ಥೆಗಳು, ಮಠಪೀಠಗಳು ಪ್ರಶಸ್ತಿ ಪುರಸ್ಕಾರಗಳನ್ನಿತ್ತು ಸನ್ಮಾನಿಸಿರುವುದು ಅರಳುವ ಗಂಧಪುಷ್ಪಕ್ಕೆ ತಂಗಾಳಿ ಬೀಸಿದಂತೆ, ರವಿಕಿರಣ ಸ್ಪರ್ಶವಾದಂತಾಗಿರುವುದು ಹೆಮ್ಮೆಯನ್ನುಂಟುಮಾಡಿದೆ. 'ಆಚಾರ್ಯ ಸೇವಾಧುರೀಣ'ರೆಂದು ಶ್ರೀ ರಂಭಾಪುರಪೀಠ, 'ಧೀಮಂತವ್ಯಕ್ತಿ' ಎಂದು ಚಿತ್ರದುರ್ಗದ ಬೃಹನ್ಮಠ, ತುಮಕೂರು ಹಿರೇಮಠ, ಮಾಗಡಿ ತಾಲ್ಲೂಕಿನ ಅಂಕನಹಳ್ಳಿಮಠ, ಕೊಟ್ಟೂರು ಜಾನುಕೋಟಿಮಠ, ಶಿವಗಂಗೆ ಮೇಲಣಗವಿಮಠ, ಕುಣಿಗಲ್ ತಾಲ್ಲೂಕಿನ ಬೆಟ್ಟಳ್ಳಿಮಠ, ಕವಲೇದುರ್ಗದ ಭುವನಗಿರಿ ಸಂಸ್ಥಾನ ಮಹಾಮತ್ತಿನ ಮಠ, ರಾಜಾಪುರ ವೀರಸಂಸ್ಥಾನಮಠ, ಎಡೆಯೂರಿನ ರಂಭಾಪುರ ವೀರಸಿಂಹಾಸನ ಸಂಸ್ಥಾನಮಠ, ತಲಕಾಡಿನ ಹಸ್ತಿಕೇರಿ ಮಠ ಮತ್ತು ವೀರಶೈವ ಸಮಾಜಗಳು ಶ್ರೀಯುತರನ್ನು ಸನ್ಮಾನಿಸಿರುವುದು ಸಂತೋಷವನ್ನುಂಟು ಮಾಡುತ್ತದೆ. ಪದ್ಮಭೂಷಣ ಡಾ. ಎಂ.ಸಿ. ಮೋದಿಯವರ ನೇತ್ರಚಿಕಿತ್ಸಾ ಶಿಬಿರಗಳಲ್ಲಿಯೂ ಶ್ರೀಕಂಠಪ್ಪನವರು ಸೇವೆ ಸಲ್ಲಿಸಿದ್ದಾರೆ.

ಸಜ್ಜನರು, ಸದ್ಗೃಹಸ್ಥರು, ವಿನಯಸೌಜನ್ಯಶೀಲರು, ಯಜಮಾನ್ ಮನೆತನದ ಸುಗಂಧ ಪುಷ್ಪವಾಗಿರುವ ಶ್ರೀಕಂಠಪ್ಪನವರು ಶ್ರೀ ಸಿದ್ಧಗಂಗಾಮಠದೊಡನೆ ಅನನ್ಯ ಭಕ್ತಿ ಬಾಂಧವ್ಯವನ್ನು ಬೆಳೆಸಿಕೊಂಡು ಬಂದಿರುವ ಗುರುಸೇವಾಶೀಲರು. ತಂದೆ ಯಜಮಾನ್ ಕೆಂಚಪ್ಪನವರ ಸದ್ಗುಣಗಳ ವಾರಸುದಾರರು. ಮಡದಿ ಶ್ರೀಮತಿ ಪುಷ್ಪಾಂಬ ಅವರೊಂದಿಗೆ ಸತಿಪತಿಗಳೊಂದಾದ ಭಕ್ತಿಯನ್ನು ಧರ್ಮಕಾರ್ಯಗಳಿಗೆ ಅರ್ಪಿಸುತ್ತಿರುವವರು. ಶ್ರೀಯುತರ ಸೇವೆಯನ್ನು ಗಮನಿಸಿದ ಶ್ರೀಮಠದ ಭಕ್ತಾದಿಗಳು ಅಭಿಮಾನಿಗಳು, ಹಳೆಯ ವಿದ್ಯಾರ್ಥಿಗಳು, ಶಿಕ್ಷಣ ಸಂಸ್ಥೆಗಳಲ್ಲಿನ ಸೇವಾ ಬಂಧುಗಳು ಶ್ರೀಯುತರನ್ನು 'ಧರ್ಮಕಾರ್ಯನಿರತ'ರೆಂದು ಗೌರವಿಸಿ ಸನ್ಮಾನಿಸಲಾಯಿತು.

☆



## ದಾಸೋಹ ಸದ್ಭಾವಿ
## ಶ್ರೀ ಟಿ. ತಿಮ್ಮಪ್ಪ

ಯಾವ ಹೂವಿನಲ್ಲಿ ಯಾವ ಗಂಧವಿರುತ್ತದೆಯೋ ಬಲ್ಲವರಿಗೇ ಗೊತ್ತು. ಕೃಷಿಕೃತ್ಯ ಕಾಯಕ ಲೋಕ ಸಂರಕ್ಷಣೆಯ ಪವಿತ್ರ ಮಣಿಹ. ಕೃಷಿಕ ಬಂಧು ಸದಾ ಸರಳ ಜೀವಿ. ಆಡಂಬರ ದೂರ. ಕೃತ್ರಿಮತೆಯ ಕಡುವೈರಿ ನಡೆಶುದ್ಧ. ಸದ್ದುಗದ್ದಲವಿರದ ಸೇವಾವ್ರತಿ. ನೇಗಿಲಯೋಗಿಯ ಜೀವನಪಥ ಹೆಸರಿನ ಕೆಸರಾಸೆಯನ್ನು ಅಪೇಕ್ಷಿಸದ ಋಜುಮಾರ್ಗ. ಎಲೆಮರೆಯ ಹೂವು ಅರಳುವ ರೀತಿ. ಈ ಹಿನ್ನೆಲೆಯಲ್ಲಿ ಬಂದವರು ಸನ್ಮಾನ್ಯ ಶ್ರೀ ಟಿ. ತಿಮ್ಮಪ್ಪನವರು. ಹುಟ್ಟಿದ್ದು ಕೊರಟಗೆರೆ ತಾಲ್ಲೂಕು ಚಿಕ್ಕಪಾಲನಹಳ್ಳಿಯಲ್ಲಿ ದಿನಾಂಕ ೧೭.೮.೧೯೧೭ರಂದು. ತಂದೆ ಶ್ರೀ ತಿಪ್ಪಣ್ಣ, ತಾಯಿ ಶ್ರೀಮತಿ ರಂಗಮ್ಮ. ಶ್ರೀ ತಿಮ್ಮಪ್ಪನವರಿಗೆ ಮೂವರು ತಮ್ಮಂದಿರು, ಒಬ್ಬಳು ತಂಗಿ. ಓದಿದ್ದು ಪ್ರೌಢಶಾಲೆಯವರೆಗೆ ಮಧುಗಿರಿಯಲ್ಲಿ. ಮನೆತನದ ಕಸಬು ವ್ಯವಸಾಯ. ಅದರೊಂದಿಗೇ ಬೆಳೆದು ಬಂದರು. ಗೃಹಸ್ಥಾಶ್ರಮಕ್ಕೆ

ಪೂಜಾರಹಳ್ಳಿಯ ಶ್ರೀಮಂತರೈತರಾಗಿದ್ದ ಶ್ರೀ ಅಡವಪ್ಪ ಮತ್ತು ಶ್ರೀಮತಿ ಗೋಪಮ್ಮನವರ ಮಗಳಾದ ಶ್ರೀಮತಿ ಪುಟ್ಟಮ್ಮನವರೊಡನೆ ನಡೆದರು. ಶ್ರೀ ಅಡವಪ್ಪನವರ ಮನೆಯಳಿಯನಾದರು. ಪೂಜಾರಹಳ್ಳಿಯ ಕುಳವಾದರು.

"ಬದುಕು ಜಟಕಾಬಂಡಿ ವಿಧಿಯದರ ಸಾಹೇಬ" – ಎನ್ನುತ್ತದೆ ಕವಿವಾಣಿ. ಶ್ರೀ ತಿಮ್ಮಪ್ಪನವರ ಸಂಸಾರ ರಥದ ಚಕ [illegible] ಉರುಳಿದುವು. ಒಂದು ಗಂಡು, ಒಂದು ಹೆಣ್ಣು ವಿಗೆ [illegible] ಧರ್ಮಪತ್ನಿ ಶ್ರೀಮತಿ ಪುಟ್ಟಮ್ಮನವರು ಶಿ[illegible] ಹೂವಾದರು. ತಿಮ್ಮಪ್ಪನವರ ಬದುಕಿಗೆ ಮಂಜ[illegible] ಆದರದು ಕೆಲವು ಕಾಲಮಾತ್ರ. ಪೂಜಾರ[illegible] ಶ್ರೀಯುತರು ತಮ್ಮ ಹುಟ್ಟೂರಾದ ಚಿಕ್ಕಪಾ[illegible] ಮರಳಿದರು. ಮನೆಮಾಡಿದರು. ನೇಗಿಲ [illegible] ಮುಂದವರಿಸಿದರು. ಕೊಂಚ ದಿನಗಳ ನಂತರ [illegible] ಮಾಡಿಕೊಂಡರು. ಶ್ರೀಮತಿ ನಾಗಮ್ಮನವರು ತಿ[illegible] ಹೋಗುತ್ತಿದ್ದ ಜೀವನದಿಗೆ ರಸವಾಗಿ ಹರಿದರು. [illegible] ಹೆತ್ತು ಮನೆಗೆ ಕಣ್ಣಾದರು. ಸಹಧರ್ಮಿಣಿಯಾಗಿ [illegible] ನಗೆಯ ಬದುಕಿಗೆ ರಂಗೋಲಿ ಬರೆದರು.

ಶ್ರೀ ತಿಮ್ಮಪ್ಪನವರು ದೈವಭಕ್ತರು. [illegible] ಜಂಗಮಾರಾಧಕರು. ಮಠಮಾನ್ಯಗಳಲ್ಲಿ ಪ್ರೀತಿ ಶ್ರದ್ಧೆಯನ್ನು ಬೆಳೆಸಿಕೊಂಡು ಬಂದಿರುವ ಧರ್ಮರಕ್ತರು. ಶ್ರೀ ಸಿದ್ಧಗಂಗಾಮಠಕ್ಕೂ ಶ್ರೀಯುತರಿಗೂ ಬೆಳೆದು ಬಂದ ಮಧುರ ಬಾಂಧವ್ಯ ಅರ್ಧಶತಮಾನಕ್ಕೂ ಹೆಚ್ಚಿನದಾಗಿದೆ. ೧೯೪೦ರಿಂದ ೧೯೯೫ರವರೆಗೆ ಅವರು ಸಲ್ಲಿಸಿದ ಸೇವೆ ಸ್ಮರಣೀಯ. ಶ್ರೀ ಸಿದ್ಧಗಂಗಾ ಜಾತ್ರೆ ನಾಡಿನಲ್ಲಿ ಸುಪ್ರಸಿದ್ಧವಾದುದು. ಇಡೀ ಜಾತ್ರೆಗೆ ದಾಸೋಹ ಕೈಂಕರ್ಯ ನಡೆಸಿಕೊಂಡು ಬಂದಿರುವ ವೈಶಿಷ್ಟ್ಯ ಶ್ರೀಮಠದ ಹೆಗ್ಗಳಿಕೆ. ಜಾತ್ರಾ ದಾಸೋಹಕ್ಕಾಗಿ ಸೇವೆಗೈಯ್ಯುವ ಸಾವಿರಾರು ಸೇವಾ ವ್ರತಿಗಳು ಕಟಿಬದ್ಧರಾಗಿರುತ್ತಾರೆ. ಅವರದೆಲ್ಲ 'ಕೀರ್ತಿಶನಿ'ಯನ್ನು ಬಳಿಗೆ ಸುಳಿಯದೊಡದ ನಿಷ್ಕಾಮಸೇವೆ. ಅಂತಹ ಸೇವಾ ಬಳಗದ ಒಂದು ನಮ್ರ ಹೂವು ಶ್ರೀ ತಿಮ್ಮಪ್ಪನವರು. ಪ್ರತಿ ವರ್ಷ ಜಾತ್ರೆಯಲ್ಲಿ ಸಾದರಕೊಪ್ಪಲಿನಲ್ಲಿ ಶ್ರೀಯುತರು ಕಾರ್ಯನಿರತರಾಗುತ್ತಿದ್ದರು. ತಮ್ಮ ಜೊತೆಗೆ ತಮ್ಮ ಸಮಾಜದ ಬಂಧುಗಳನ್ನು ಕರೆತಂದು ಕೊಪ್ಪಲಿನ ಕೈಂಕರ್ಯದಲ್ಲಿ ಲೋಪದೋಷಗಳು ಎಡೆತಾಕದಂತೆ ಕಟ್ಟೆಚ್ಚರ ವಹಿಸುತ್ತಿದ್ದುದು ಎಂದೂ ಮರೆಯಲಾಗದ ಅನುಭವ. ದಾಸೋಹದಲ್ಲಿ ನಿರಂಹಾಕರವಿರುತ್ತದೆ. ದಾಸೋಹಿಯಾದವನು ಅಹಂಕಾರ ನಿರಸನಮಾಡಿಕೊಂಡಿರುತ್ತಾನೆ. ತಿಮ್ಮಪ್ಪನವರು ಈ ತತ್ವವನ್ನರಿತವರು ಮಾತ್ರವಲ್ಲ [illegible] ದವರಾಗಿದ[illegible] ಕಾಯಕ ಪ್ರೇಮಿಗಳಾದ ತಿ[illegible] ಲಾಸ' ಶರಣರ ವಾಣಿಯನ್ನು [illegible] ಅವರ [illegible] ಶ್ರೀ [illegible]

"ಮಾಡಿದೆನೆಂಬುದು [illegible]

ಸುಪುತ್ರರ ತಂದೆಯಾದ ಶ್ರೀ ತಿಮ್ಮಪ್ಪನವರು ಆದರ್ಶ ಸಂಸಾರಿ. ಅವರ ಸುಯೋಗ್ಯ ಮಗನಾದ ಶ್ರೀ ಟಿ. ಗಂಗಾಧರಯ್ಯನವರು ತಜ್ಞ ಇಂಜಿನಿಯರೆಂದು ಪ್ರಸಿದ್ಧರಾಗಿ ಅಂತರ ರಾಷ್ಟ್ರೀಯ ಖ್ಯಾತಿವೆತ್ತಿದ್ದಾರೆಂಬುದನ್ನು ಈ ಸಂದರ್ಭದಲ್ಲಿ ನೆನೆಯಲು ಸಂತೋಷವಾಗುತ್ತದೆ. ಅಂತೆಯೇ ಮೊಮ್ಮಗನಾದ ಶ್ರೀ ಸುಹಾಸ್ ಕೂಡ ವಿದೇಶದಲ್ಲಿ ಅಮೇರಿಕಾದ ಫ್ಲೋರಿಡಿಯಾ ವಿಶ್ವವಿದ್ಯಾಲಯದಲ್ಲಿ ಪಿ.ಹೆಚ್.ಡಿ. ವ್ಯಾಸಂಗ ಮಾಡುತ್ತಿರುವುದು ಮತ್ತೊಂದು ಯಶಸ್ಸಿನ ಗರಿ ತಿಮ್ಮಪ್ಪನವರ ಸರಳ ಜೀವನದ ವಿನಮ್ರ ರುಮಾಲಿಗೆ.

ಶ್ರೀ ತಿಮ್ಮಪ್ಪನವರ ಮತ್ತು ಶ್ರೀಮಠದ ಬಾಂಧವ್ಯ ಲಿಂಗೈಕ್ಯ ಶಿವಯೋಗಿ ಪರಮಪೂಜ್ಯ ಶ್ರೀ ಉದ್ದಾನಸ್ವಾಮಿಗಳವರ ಕಾಲದಿಂದಲೂ ಬೆಳೆದು ಬಂದಿದ್ದು. ಶ್ರೀಯುತರ ಸೇವೆಯನ್ನು ಮನಗಂಡ ಶ್ರೀಮಠದ ಭಕ್ತಾದಿಗಳು, ಅಭಿಮಾನಿಗಳು ಹಳೆಯ ವಿದ್ಯಾರ್ಥಿಗಳು, ಶಿಕ್ಷಣ ಸಂಸ್ಥೆಗಳಲ್ಲಿನ ಸೇವಾಬಂಧುಗಳು "ದಾಸೋಹ ಸದ್ಭಾವಿ"ಗಳೆಂದು ಗೌರವಿಸಿ ಸನ್ಮಾನಿಸಲಾಯಿತು.





# ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನದ ಉದ್ಘಾಟನಾ ಸಮಾರಂಭ



ಪರಮಪೂಜ್ಯ ಶ್ರೀ ಶ್ರೀಗಳವರಿಂದ ವಸ್ತು ಪ್ರದರ್ಶನದ ಉದ್ಘಾಟನೆ. ಈ ಸಂದರ್ಭದಲ್ಲಿ ಇನ್‌ಫೋಸಿಸ್ ಧರ್ಮದರ್ಶಿ ಶ್ರೀಮತಿ ಸುಧಾ ಎನ್. ಮೂರ್ತಿ, ಅರಣ್ಯ ಸಚಿವ ಶ್ರೀ ಕೆ.ಹೆಚ್. ರಂಗನಾಥ್ ಮೊದಲಾದ ಗಣ್ಯರು ಉಪಸ್ಥಿತರಿದ್ದರು

"ಜಗತಿನ ಭೂಪಟದಲ್ಲಿ ಪ್ರಮುಖ ಸ್ಥಾನ ಪಡೆದ ಭರತ ಖಂಡವಿಂದು ಅಶಾಂತಿಯ ಅಗ್ನಿಕುಂಡವಾಗಿದೆ. ಭವಿಷ್ಯ ಭಯಾನಕವಾಗಿದೆ" ಎಂದು ಪರಮ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ವಿಷಾದಿಸಿದರು.

ತಾ॥ ೧-೩-೨೦೦೨ ರ ಶುಕ್ರವಾರ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ನಡೆದ ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನದ ಉದ್ಘಾಟನಾ ಸಮಾರಂಭದ ದಿವ್ಯ ಸಾನಿಧ್ಯ ವಹಿಸಿ ಮಾತನಾಡುತ್ತಿದ್ದರು.

ಹೊಸ ಯುಗ ನಿರ್ಮಾಣವಾಗಿದೆ, ಗುಲಾಮ ಗಿರಿಯಿಂದ ವಿಮುಕ್ತರಾಗಿದ್ದೇವೆ, ಆತ್ಮಗೌರವ ಬಂದಿದೆ ಎಂದು ಸ್ವಾತಂತ್ರ್ಯ ಬಂದ ಸಂದರ್ಭದಲ್ಲಿ ನುಡಿದ ವರಕವಿ ರವೀಂದ್ರರ ಮಾತು ಅರ್ಥಕಳೆದುಕೊಳ್ಳುತ್ತಿದೆ ಎಂದರಲ್ಲದೆ ಎಲ್ಲರೂ ಶ್ರಮಿಸಬೇಕು, ಎಲ್ಲರೂ ಪ್ರಗತಿಯಾಗಬೇಕು, ರಾಷ್ಟ್ರಭಿಮಾನವುಳ್ಳವರಾಗಬೇಕು, ದುಡಿಮೆ ಮಾಡಬೇಕು, ಈ ವಸ್ತು ಪ್ರದರ್ಶನವನ್ನು ಗ್ರಾಮೀಣ ಜನತೆ ಸದುಪಯೋಗಪಡಿಸಿಕೊಳ್ಳಬೇಕು ಎಂದು ಕರೆ ನೀಡಿದರು.

ವಸ್ತು ಪ್ರದರ್ಶನವನ್ನು ಉದ್ಘಾಟನೆ ಮಾಡಿದ ಕರ್ನಾಟಕ ಸರ್ಕಾರದ ಅರಣ್ಯ ಜೀವಶಾಸ್ತ್ರ ಮತ್ತು ಪರಿಸರ ಸಚಿವರಾದ ಶ್ರೀ ಕೆ.ಹೆಚ್. ರಂಗನಾಥ್ ಅವರು ವಸ್ತು ಪ್ರದರ್ಶನವನ್ನು ಉದ್ಘಾಟನೆ ಮಾಡಿ ಮಾತನಾಡುತ್ತಾ "ನಮ್ಮ ರಾಷ್ಟ್ರ ಕೈಗಾರಿಕಾ ಕ್ಷೇತ್ರದಲ್ಲಿ ಎಷ್ಟೇ ಪ್ರಗತಿ ಸಾಧಿಸಿದ್ದರೂ ಮುಂದುವರಿದ ರಾಷ್ಟ್ರಗಳಿಗೆ ಹೋಲಿಸಿದರೆ ಏನೇನು ಸಾಲದು. ಮಹಾತ್ಮಾಜಿಯವರು ಕನಸು ಕಂಡ ಗ್ರಾಮ ಸ್ವರಾಜ್ಯ ಕಲ್ಪನೆ ಮಾಯವಾಗುತ್ತಿದೆ. ಗೃಹಕೈಗಾರಿಕೆಗಳು ವಿನಾಶದ ಅಂಚಿನಲ್ಲಿವೆ ಎಂದು ಆತಂಕ ವ್ಯಕ್ತಪಡಿಸಿದರು. ಅನಕ್ಷರಸ್ಥರಾದ ಗ್ರಾಮೀಣ



ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ

ಬಂಧುಗಳಿಗೆ ಈ ವಸ್ತು ಪ್ರದರ್ಶನ ತುಂಬ ಸಹಕಾರಿಯಾಗಿದೆ. ವೈಜ್ಞಾನಿಕವಾದ ಎಲ್ಲಾ ವಿಚಾರಗಳನ್ನು ಮುದ್ರಿಸಲು ಸಹಕಾರಿಯಾಗಿದೆ ಎಂದರಲ್ಲದೆ ತುಂಬ ಅಚ್ಚುಕಟ್ಟಾಗಿ ವ್ಯವಸ್ಥೆ ಮಾಡಿರುವ ಇಲಾಖೆಗಳನ್ನು ಪ್ರಶಂಸಿಸಿದರು. ಈ ವಸ್ತು ಪ್ರದರ್ಶನದಲ್ಲಿ ಪ್ರದರ್ಶಿಸುವ ಪ್ರತಿ ಇಲಾಖಾ ಮಳಿಗೆಗಳು ತಮ್ಮ ಖರ್ಚನ್ನು ಇಲಾಖೆಯೆ ಮಾಡಲು ಅನುಕೂಲ ವಾಗುವಂತೆ ಮುಖ್ಯಮಂತ್ರಿಗಳೊಡನೆ ಚರ್ಚಿಸಿ ತೀರ್ಮಾನ ಕೈಗೊಳ್ಳಲಾಗುವುದು ಎಂದು ಭರವಸೆ ನೀಡಿದರು.

ಬೆಂಗಳೂರಿನ ಇನ್‌ಫೋಸಿಸ್‌ನ ಧರ್ಮದರ್ಶಿ ಗಳಾದ ಶ್ರೀಮತಿ ಸುಧಾ ಎನ್. ಮೂರ್ತಿ ಅವರು ಸಿದ್ಧಗಂಗಾ ಜಾತ್ರಾ ವಿಶೇಷಾಂಕವನ್ನು ಬಿಡುಗಡೆ ಮಾಡಿ ಮಾತನಾಡುತ್ತಾ ''ನಾನು ಗ್ರಾಮೀಣ ಪರಿಸರದಲ್ಲಿ ಹುಟ್ಟಿ ಬೆಳೆದವಳಾದ್ದರಿಂದ ಹಳ್ಳಿಗಾಡಿನ ಸಂಸ್ಕೃತಿ, ಕಲೆ, ಸಾಹಿತ್ಯ ಅವರ ಕಷ್ಟಕಾರ್ಪಾಣ್ಯಗಳ ಅರಿವಿದೆ. ನನಗೆ ಬಂದ ಬಿರುದು, ಪ್ರಶಸ್ತಿಗಳು ಭಗವಂತನ ಕೃಪೆಯಿಂದ ಬಂದಿವೆ ''ಮಾಡಿದೆನೆಂಬುದು ಮನದಲ್ಲಿ ಹೊಳೆದರೆ ಏಡಿಸಿಕಾಡಿತ್ತು ಶಿವನ ಡಂಗುರ'' ಎಂಬ ಬಸವಣ್ಣನವರ ವಚನವನ್ನು ಉದಾಹರಿಸುತ್ತಾ ನಾವು ಮಾಡಿರುವ ಸಾಧನೆ ಕಡಿಮೆ, ಮಾಡಬೇಕಾದುದು ಬಹಳಷ್ಟಿದೆ ಎಂದು ತಿಳಿಸುತ್ತಾ ಹಣ, ಅಧಿಕಾರವಿದ್ದಾಗ ವಿನಯ ಗುಣ ವಿರಬೇಕೆಂದು ತಿಳಿಸಿದರು.

ಅನ್ನದಾನ, ವಿದ್ಯಾದಾನ, ಸಂಸ್ಕೃತಿ ದಾನ, ಮೂರು ಶ್ರೇಷ್ಟವಾದವುಗಳು. ಇಂತಹ ಜಾತ್ರೆಗಳು ಮೇಳಗಳು ಇವುಗಳನ್ನು ಕೊಡಬಲ್ಲವು ''ಜ್ಞಾನವಿಲ್ಲದ ಮನುಷ್ಯ ಗಂಧವಿಲ್ಲದ ಹೂವಿನಂತೆ'' ನಿಜವಾದ ಜ್ಞಾನಿಗಳಿಗೆ ಕಾಲ, ಲಿಂಗ ಬೇಧವಿಲ್ಲ. ವಿದ್ಯಾವಂತ ಸರ್ವರಲ್ಲಿಯೂ, ಎಲ್ಲಾ ಕಾಲದಲ್ಲಿ ದೇಶದಲ್ಲೂ ಪೂಜ್ಯ ನಾಗುತ್ತಾನೆ. ನಾವು ತಿಳಿದವರಿಂದ, ಪುಸ್ತಕಗಳಿಂದ ಗೋಷ್ಠಿಗಳಿಂದ ವಿಚಾರ ಗಳನ್ನು ತಿಳಿಯಬೇಕು. ಈ ವಸ್ತು ಪ್ರದರ್ಶನದ ಮುಖಾಂತರ ಭಾರತೀಯ ಸಂಸ್ಕೃತಿಯನ್ನು ಪರಿಚಯಿಸಲು ಸಹಕಾರಿಯಾಗಿದೆ. ಪರಮಪೂಜ್ಯರ ಭವ್ಯ ಕಲ್ಪನೆ ನನಗೆ ಮೆಚ್ಚುಗೆಯಾಗಿದೆ ಎಂದು ಸಂತೋಷ ವ್ಯಕ್ತಪಡಿಸಿದರು.

ಅಂದು ಬೆಳಿಗ್ಗೆ ೧೦ ಗಂಟೆಗೆ ಶ್ರೀಕ್ಷೇತ್ರಕ್ಕೆ ಆಗಮಿಸಿದ ಶ್ರೀಮತಿ ಸುಧಾ ಎನ್. ಮೂರ್ತಿಯವರು ಪ್ರಸಾದ ನಿಲಯಕ್ಕೆ ಆಗಮಿಸಿ ಜಾತಿಬೇಧವಿಲ್ಲದೆ ೮ ಸಾವಿರಮಂದಿ ಮಕ್ಕಳು ಸಮವಸ್ತ್ರಧರಿಸಿ ಒಂದೇ ಪಂಕ್ತಿಯಲ್ಲಿ ಕುಳಿತು ಪ್ರಸಾದ ಸ್ವೀಕರಿಸುವುದನ್ನು ವೀಕ್ಷಿಸಿ ಆಶ್ಚರ್ಯವನ್ನು ವ್ಯಕ್ತಪಡಿಸುತ್ತಾ ''ನಾನು ೧೨ನೇ ಶತಮಾನದ ಬಸವಣ್ಣನವರ ಮಹಾಮನೆಗೆ ಪ್ರವೇಶ ಮಾಡಿದಂತೆ ಭಾಸವಾಗುತ್ತಿದೆ ಎಂದು ಭಾವುಕರಾಗಿ ನುಡಿದರಲ್ಲದೆ, ಸ್ವಾಮೀಜಿಯವರು ನಿಜವಾಗಿಯು ಅಭಿನವ ಬಸವಣ್ಣ ನವರು ಎಂದು ನುಡಿದರು. ಅಂದು ಸಂಜೆ ಪ್ರತಿನಿತ್ಯ ನಡೆಯುವ ಸಾಮೂಹಿಕ ಪ್ರಾರ್ಥನ ಮಂದಿರಕ್ಕೆ ಆಗಮಿಸಿ ೮ ಸಾವಿರ ಮಂದಿ ಮಕ್ಕಳು ಜಾತಿಬೇಧವಿಲ್ಲದೆ ಸಾಮೂಹಿಕ ಸಮವಸ್ತ್ರಧರಿಸಿ ಪ್ರಾರ್ಥನೆ ಮಾಡುತ್ತಿದ್ದ ದೃಶ್ಯವನ್ನು ವೀಕ್ಷಿಸಿದರು. ಇದೊಂದು ಅನುಭವ ಗೋಷ್ಠಿಯಂತೆ ಕಂಗೊಳಿಸುತ್ತಿದೆ'' ಎಂದು ಅಭಿಮಾನ ದಿಂದ ನುಡಿದರು.





ಎಂಟು ಸಹಸ್ರ ಮಂದಿ ಮಕ್ಕಳಿಗೆ ಉಚಿತವಾಗಿ, ಜಾತಿಬೇಧವಿಲ್ಲದೆ ಅನ್ನದಾಸೋಹ, ಜ್ಞಾನದಾಸೋಹ, ಸಂಸ್ಕೃತಿಯ ಅರಿವು ಮೂಡಿಸುತ್ತಿರುವಂತಹ ಪರಮಪೂಜ್ಯರ ಸೇವೆ ಅದ್ಭುತವಾಗಿದೆ. ಇವರು ವಿಶ್ವಸಂಸಾರಿಗಳು. ಶ್ರೀಕ್ಷೇತ್ರವನ್ನು ಪರಮಪೂಜ್ಯರನ್ನು ದರ್ಶನ ಮಾಡಬೇಕೆಂಬ ನನ್ನ ಬಹುದಿನಗಳ ಕನಸು ನನಸಾಗಿದೆ. ಇಲ್ಲಿ ವ್ಯಾಸಂಗ ಮಾಡುತ್ತಿರುವ ಮಕ್ಕಳು ಉತ್ತಮ ಸಾಂಸ್ಕರವುಳ್ಳವರಾಗಿ ದೇಶದ ಆಸ್ತಿಯಾಗಿ ಎಂದು ಕರೆ ನೀಡಿದರು.

ವಸ್ತು ಪ್ರದರ್ಶನದ ಸಮಾರಂಭದಲ್ಲಿ ಹಾಗೂ ಪ್ರಾರ್ಥನಾ ಮಂದಿರದಲ್ಲಿ ಮುಖ್ಯ ಅತಿಥಿಗಳಾಗಿ ತುಮಕೂರು ಜಿಲ್ಲಾ ಪಂಚಾಯತ್ ಅಧ್ಯಕ್ಷರಾದ ಶ್ರೀಮತಿ ದಾಕ್ಷಾಯಿಣಿ ಅಶ್ವತ್ಥ್, ತುಮಕೂರು ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹ ಅಧಿಕಾರಿಗಳಾದ ಶ್ರೀ ಎಂ.ಬಿ ದ್ಯಾಬೇರಿ, ಎಪಿಎಂಸಿ ಅಧ್ಯಕ್ಷರಾದ ಶ್ರೀ ಪಂಚಾಕ್ಷರಯ್ಯನವರು ಆಗಮಿಸಿದ್ದರು. ತುಮಕೂರು ವಿದ್ಯಾನಸಭಾ ಸದಸ್ಯರಾದ ಶ್ರೀ ಎಲ್. ಶಿವಣ್ಣನವರು ಅಧ್ಯಕ್ಷತೆ ವಹಿಸಿದ್ದರು.

ಕುಮಾರಿ ಪವಿತ್ರ ಮತ್ತು ಸಂಗಡಿಗರು ಪ್ರಾರ್ಥನೆ ಮಾಡಿದರು. ಸಹಕಾರ್ಯದರ್ಶಿಗಳಾದ ಶ್ರೀ ಎಸ್. ಶಿವಕುಮಾರ್ ಅವರು ಸ್ವಾಗತಿಸಿದರು, ಶ್ರೀ ಕೆ.ಬಿ. ರೇಣುಕಯ್ಯ ವಸ್ತು ಪ್ರದರ್ಶನದ ಸಂಕ್ಷಿಪ್ತ ವರದಿಯನ್ನು ವಾಚಿಸಿದರು. ಶ್ರೀ ಕುಮಾರಸ್ವಾಮಿ ವಂದನೆ ಸಲ್ಲಿಸಿದರು. ಶ್ರೀ ಕೆ.ಎಸ್. ಉಮಾಮಹೇಶ್ ಕಾರ್ಯಕ್ರಮ ನಿರೂಪಿಸಿದರು.

*ವರದಿ : ಕೆ.ಬಿ. ಶಿವಶಂಕರಯ್ಯ*

# ಮರೆಯಾಗುತ್ತಿರುವ ಮಾನವೀಯ ಪ್ರಜ್ಞೆ
## ಸಿದ್ಧಗಂಗಾ ಶ್ರೀಗಳ ವಿಷಾದ

ಇಂದಿನ ಆಧುನಿಕ ಜಗತ್ತಿನಲ್ಲಿ ಮಾನವ ಪ್ರಜ್ಞೆ ಮಾಯವಾಗಿದೆ, ಎಂದು ಶ್ರೀ ಸಿದ್ಧಗಂಗಾ ಕ್ಷೇತ್ರದ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ವಿಷಾದ ವ್ಯಕ್ತಪಡಿಸಿದರು.

ಚಿತ್ತಾಪೂರ ತಾಲೂಕಿನ ನಾಲವಾರದಲ್ಲಿ ನಡೆದ ಸದ್ಗುರು ಶ್ರೀ ಕೋರಿ ಸಿದ್ಧೇಶ್ವರರ ೧೨೬ನೇ ಜಾತ್ರಾ ಮಹೋತ್ಸವದ ಸಮಾರೋಪ ಸಮಾರಂಭದಲ್ಲಿ ಸಾನ್ನಿಧ್ಯ ವಹಿಸಿ ಮಾತನಾಡಿದ ಅವರು ''ಮನುಷ್ಯ ಮಾನವ ನಾಗಿರದೇ ದಾನವನಾಗುತ್ತಿದ್ದಾನೆ. ಅದಕ್ಕಾಗಿ ಮಾನವ ಪ್ರಜ್ಞೆ ಸ್ಥಾಪಿತವಾಗುವುದು ಇಂದಿನ ಸಮಾಜಕ್ಕೆ ಅಗತ್ಯವಾಗಿದೆ'' ಎಂದು ಹೇಳಿದರು. ''ಮನುಷ್ಯ ದಿನೇ ದಿನೇ ಮಹಾಸಾಧಕನಾಗುತ್ತಿದ್ದಾನೆ. ಆದರೆ ಅಮೆರಿಕಾ, ದೆಹಲಿ ಸಂಸತ್ ಮತ್ತು ಕೋಲ್ಕತ್ ಮೇಲಿನ ದಾಳಿ ಮನುಷ್ಯನ ದುರುಪಯೋಗ ತೋರಿಸುತ್ತದೆ ಎಂದು ಹೇಳಿದರು. ತಂತ್ರ ಸ್ಥಾನದಲ್ಲಿ ಸಾಕಷ್ಟು ಮುಂದುವರಿಯುತ್ತಿದ್ದು ಅದನ್ನು ಉತ್ತಮ ರೀತಿಯಲ್ಲಿ ಬಳಸಿಕೊಳ್ಳದೆ ಮನುಷ್ಯ ಕುಲವನ್ನೇ ನಾಶಪಡಿಸುವಂತ ಹೇಯ ಘಟನೆಗಳು ಆಗುತ್ತಿವೆ ಎಂದು ವಿಷಾದ ವ್ಯಕ್ತಪಡಿಸಿ ಇದಕ್ಕಾಗಿ ಚಿಂತನೆ ಮಾಡಬೇಕಾದ ಅವಶ್ಯಕತೆ ಈಗಿದೆ ಎಂದರು. ಈ ಎಲ್ಲಾ ದೃಷ್ಟಿಯಿಂದ ಮಹಾಮಾನವತಾವಾದಿ ಬಸವಣ್ಣನವರ ವಚನಗಳು ತತ್ವಗಳ ಅಧ್ಯಯನದ ಅಗತ್ಯವಾಗಿದೆ, ದೇಹ, ಮಾತು ಮನಸ್ಸು ಶುದ್ಧಿಯಾಗಬೇಕಾಗಿದೆ. ನಾಶದ ಕಡೆಗೆ ಸಾಗುತ್ತಿರುವ ಜಗತ್ತನ್ನು ರಕ್ಷಿಸಲು ಮತ್ತು ಶಾಂತಿ ಪಡೆಯಲು ಶರಣ ಧರ್ಮ ಅಥವಾ ಮಾನವ ಧರ್ಮ ಪಾಲಿಸುವುದು ಇಂದು ಅನಿವಾರ್ಯ'' ಎಂದರು.

ಸಮಾಜ ಜಾಗೃತಿಗಾಗಿ ನಾಲವಾರದ ಶ್ರೀಗಳು ಮಾಡುತ್ತಿರುವ ಕಾರ್ಯವನ್ನು ಶ್ಲಾಘಿಸಿದ ಅವರು ಶ್ರೀಗಳ ಸದ್ಭಾವನೆಯ ಕರೆ, ಅಂತರಂಗದ ಕರೆ ತಮ್ಮನ್ನು ಇಲ್ಲಿಗೆ ಕರೆದುಕೊಂಡು ಬಂದಿದೆ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿ ನುಡಿದರು.

ಕಾರ್ಯಕ್ರಮದ ನೇತೃತ್ವ ವಹಿಸಿದ್ದ ಶ್ರೀಮಠದ ಪೀಠಾಧಿಪತಿ ಪೂಜ್ಯ ತೋಂಟೇಂದ್ರ ಮಹಾಸ್ವಾಮಿಗಳು




ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಂದ ನೂತನ ಕಲ್ಯಾಣ ಮಂಟಪದ ಉದ್ಘಾಟನೆ. ಈ ಸಂದರ್ಭದಲ್ಲಿ ನಾಲವಾರದ ತೋಟೇಂದ್ರ ಶ್ರೀಗಳು, ಆರೋಗ್ಯ ಸಚಿವ ಡಾ. ಎ.ಬಿ. ಮಲಕರೆಡ್ಡಿ ಹಾಗೂ ನಾಗರಾಜಗೌಡ ಇಟಗಿ ಅವರು ಉಪಸ್ಥಿತರಿದ್ದರು

ಮಾತನಾಡಿ, ವಚನ ತತ್ವಗಳನ್ನು ಪಾಲಿಸಿಕೊಂಡು ಬರುತ್ತಿರುವ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಇಂದಿನ ಆಧುನಿಕ ಬಸವಣ್ಣನವರು ಎಂದರೆ ತಪ್ಪಾಗಲಾರದು ಎಂದು ನುಡಿದರು. ಅವರ ಮಾತು ಮಾತಲ್ಲ, ಅವು ವಚನಗಳು ಎಂದು ಹೇಳಿದ ಶ್ರೀಗಳು ಪ್ರತಿದಿನ ಸುಮಾರು ೮-೧೦ ಸಾವಿರ ವಿದ್ಯಾರ್ಥಿಗಳಿಗೆ ಅನ್ನ ದಾಸೋಹ ಮಾಡುತ್ತಿರುವ ಕಾರ್ಯವನ್ನು ವಿದೇಶದಲ್ಲಿ ಭಾರತದ ಪ್ರಧಾನಿ ವಾಜಪೇಯಿಯವರು ಶ್ಲಾಘಿಸಿದ್ದನ್ನು ನೆನಪಿಸಿದರು. ಅವರು ಮಾಡಿದ ಸಾಧನೆ, ಮಾಡುತ್ತಿರುವ ತ್ರಿವಿಧ ದಾಸೋಹ ಕಾರ್ಯ ಮತ್ತು ಇಳಿವಯಸ್ಸಿನಲ್ಲೂ ಕೈಗೊಳ್ಳುವ ಕ್ರಿಯೆಗಳು ಕಂಡರೆ ಸಿದ್ಧಗಂಗಾ ಶ್ರೀಗಳು ಜಗತ್ತಿನ ಆಶ್ಚರ್ಯಗಳಲ್ಲಿ ಇವರೊಬ್ಬರಾಗಿದ್ದಾರೆ ಎಂದರು.

ಹೊನ್ನಶರಣಗಿ, ಹಾಗರಗಿ, ಜೇರವಗಿ, ಶರಡಕಲ್ ಶ್ರೀಗಳು ಆಂಧ್ರದ ಮಾಜಿ ಸಚಿವ, ಹಾಲಿ ಶಾಸಕರು ವೈ. ದುಲ್ಲಾರೆಡ್ಡಿ ವೀರಶೈವ ಸಮಾಜದ ಜಿಲ್ಲಾಧ್ಯಕ್ಷ ಬಸವರಡ್ಡಿ ಇಟಗಿ, ಮುಂಬಯಿ ಪೊಲೀಸ್ ಅಧಿಕಾರಿ ಹರೀಶ್ ರಾಠೋಡ್ ಪತ್ರಕರ್ತ ಟಿ. ಮಹಾದೇವಪ್ಪ ಮುಖ್ಯ ಅತಿಥಿಗಳಾಗಿದ್ದರು.

ಶ್ರೀ ನಾಗರಾಜಗೌಡ ಇಟಗಿ, ಶ್ರೀ ಶಂಕ್ರಪ್ಪ ಸಾಹು ಮಾಕಲ್ ಸೇರಿದಂತೆ ಅನೇಕರನ್ನು ಸನ್ಮಾನಿಸಲಾಯಿತು. ಶರಣಕುಮಾರ ಜಾಲಹಳ್ಳಿಯವರಿಂದ ಸಂಗೀತ ಮೋಟಗಿ ಮಠದ ಶ್ರೀ ಚೆನ್ನಬಸವದೇವರು ಅಥಣಿ ನಿರೂಪಿಸಿದರು. ಇದಕ್ಕೂ ಮುನ್ನ ನೂತನ ಕಲ್ಯಾಣ ಮಂಟಪವನ್ನು ಡಾ|| ಶ್ರೀ ಶ್ರೀ ಶಿವಕುಮಾ ಮಹಾಸ್ವಾಮಿಗಳು ಉದ್ಘಾಟಿಸಿದರು. ಆರೋಗ್ಯ ಸಚಿವರ ಡಾ. ಎ.ಬಿ. ಮಲಕರೆಡ್ಡಿ ಉಪಸ್ಥಿತರಿದ್ದರು.

ರಥೋತ್ಸವ - ಜನಸಾಗರದ ಮಧ್ಯೆ ಕೋರಿಸಿದ್ದೇಶ್ವರರ ೧೨೬ನೇ ಜಾತ್ರಾ ಮಹೋತ್ಸವದಲ್ಲಿ ರಥೋತ್ಸವ ವೈಭವದಿಂದ ಜರುಗಿತು.

*ವರದಿ : ಚನ್ನಬಸವದೇವರು ಅಥಣಿ*




ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯ ಸಾನ್ನಿಧ್ಯದಲ್ಲಿ ನಡೆದ ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನ ಉದ್ಘಾಟನಾ ಸಮಾರಂಭದಲ್ಲಿ ಇನ್‌ಫೋಸಿಸ್ ಧರ್ಮದರ್ಶಿ ಶ್ರೀಮತಿ ಸುಧಾಮೂರ್ತಿಯವರಿಂದ ''ಸಿದ್ಧಗಂಗಾ'' ವಿಶೇಷ ಸಂಚಿಕೆ ಬಿಡುಗಡೆ. ವೇದಿಕೆಯಲ್ಲಿ ಅರಣ್ಯ ಸಚಿವ ಶ್ರೀ ಕೆ.ಎಚ್. ರಂಗನಾಥ್ ಮತ್ತು ತುಮಕೂರು ಜಿಲ್ಲಾ ಪಂಚಾಯತ್ ಉಪಕಾರ್ಯದರ್ಶಿ ಶ್ರೀ ಕೆ.ಎನ್. ಗೋವಿಂದರಾಜು ಅವರು




ಏಪ್ರಿಲ್ 18 ರಂದು ಮಾಗಡಿ ತಾಲ್ಲೂಕು ಬ್ಯಾಲಕೆರೆ ಗ್ರಾಮದಲ್ಲಿ ಏರ್ಪಡಿಸಿದ್ದ ಗ್ರಾಮಾಂತರ ಬಸವ ಜಯಂತಿ ಕಾರ್ಯಕ್ರಮದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ. ವೇದಿಕೆಯಲ್ಲಿ: ವಿಧಾನ ಪರಿಷತ್ ಸದಸ್ಯ ಶ್ರೀ ಎಸ್. ಚನ್ನಬಸವಯ್ಯ, ಮಾಜಿ ಸಚಿವ ಶ್ರೀ ಸಿ.ಎಂ. ಉದಾಸಿ, ಶಾಸಕ ಶ್ರೀ ಎಸ್.ಎಸ್. ಪಾಟೀಲ್, ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ, ವೀ.ಸ. ಬ್ಯಾಂಕ್ ಅಧ್ಯಕ್ಷ ಶ್ರೀ ಬಿ.ಎಸ್. ಪರಮಶಿವಯ್ಯ ಹಾಗೂ ಶ್ರೀ ಚಲುವರಾಜು ಅವರಿದ್ದಾರೆ.